# ಮೊಳಕಾಲ್ಮೂರು ಪರಿಸರದ ಮಾದಿಗ ಸಮುದಾಯದ ಆಚರಣೆಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

ಹನುಮಂತಪ್ಪ ಡಿ.

ಮಾರ್ಗದರ್ಶಕರು

ಡಾ. ಸ.ಚಿ.ರಮೇಶ್

ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೬-೦೭

# ಮೊಳಕಾಲ್ಮೂರು ಪರಿಸರದ ಮಾದಿಗ ಸಮುದಾಯದ ಆಚರಣೆಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

ಹನುಮಂತಪ್ಪ ಡಿ.



ಮಾರ್ಗದರ್ಶಕರು

ಡಾ. ಸ.ಚಿ.ರಮೇಶ್

ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೬-೦೭

# ಪ್ರಮಾಣ ಪತ್ರ

**ಮೊಳಕಾಲ್ಮೂರು ಪರಿಸರದ ಮಾದಿಗ ಸಮುದಾಯದ ಆಚರಣೆಗಳು** ಎಂಬ ನಿಬಂಧವನ್ನು ಪ್ರೊ. ಸ. ಚಿ. ರಮೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 20-02-02

ಹನುಮಂತಪ್ಪ

**ಹನುಮಂತಪ್ಪ ಡಿ.**
ಸಂಶೋಧಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಮಾರ್ಗದರ್ಶಕರ ಪ್ರಮಾಣಪತ್ರ

**ಮೊಳಕಾಲ್ಮೂರು ಪರಿಸರದ ಮಾದಿಗ ಸಮುದಾಯದ ಆಚರಣೆಗಳು** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಹನುಮಂತಪ್ಪ ಡಿ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ** : ವಿದ್ಯಾರಣ್ಯ
**ದಿನಾಂಕ** : 30-7-2014

**ಡಾ. ಸ. ಚಿ. ರಮೇಶ್**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಡಾ ಸ ಚಿ ರಮೇಶ್
ಪ್ರಾಧ್ಯಾಪಕರು-ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೧ ಪೀಠಿಕೆ

ಮಾನವ ಮೂಲತಃ ಸಮಾಜ ಜೀವಿ. ಈ ವಿಷಯವನ್ನು ಸುಮಾರು ಎರಡು ಸಾವಿರ ವರ್ಷಗಳ ಹಿಂದೆಯೇ ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ ಹೇಳಿದ್ದನು. ಮಾನವ ಸಮಾಜ ಜೀವಿಯಾಗಿ ಸಾಮಾಜಿಕ ನಿಯಮಗಳ ಚೌಕಟ್ಟಿನಲ್ಲಿ ಬದುಕುವುದು ಆತನಿಗೆ ಅನಿವಾರ್ಯವಾಯಿತು. ಹೀಗೆಯೇ ಸಮೂಹಗಳ ಸಹಾಯದಿಂದ ಸಾಹಸದಿಂದ, ಮಾತ್ರ ಮಾನವನಾಗಿ ಜೀವಿಸಲಾರ. ಆತನ ಸಾಮಾಜಿಕ ನಡತೆ ವ್ಯಕ್ತಿತ್ವ ಎಂಬುದು ಸಮೂಹಗಳ ಮಧ್ಯೆ ಬದುಕಲು ಮುಖ್ಯವಾಗಿರುತ್ತದೆ. ಇತಿಹಾಸದ ಆರಂಭದಿಂದಲೂ ಮಾನವನು ಸಮೂಹಗಳಲ್ಲಿ ಜೀವಿಸುತ್ತಾ ಬಂದವನು. ತಮ್ಮ ಒಡನಾಡಿಗಳ ಸಹವಾಸ ಮತ್ತು ಸಹಯೋಗದಿಂದ ಹೊಸ ಸಮೂಹಗಳನ್ನು ಸ್ಥಾಪಿಸುತ್ತಾ ಬಂದಿದ್ದಾನೆ. ಮಾನವನು ಸೃಷ್ಟಿಸುತ್ತಾ ಬಂದಿರುವ ಅವನ ಭಾಷೆ, ಆಚಾರ-ವಿಚಾರದಿಂದಾಗಿ ಸಮೂಹದೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ಸಾಧ್ಯವಾಗಿದೆ. ಮಾನವನ ದೈನಂದಿನ ವ್ಯವಹಾರಗಳಲ್ಲಿ ಕಂಡುಬರುವ ಅಸಂಖ್ಯಾತ ಸಮೂಹಗಳೇ ಸಮಾಜವೆಂಬ ಬೃಹತ್ ವ್ಯವಸ್ಥೆಯನ್ನು ನಿರ್ಮಿಸುವುದು. ಆದುದರಿಂದಲೇ ಸಮಾಜ ಎಂದರೆ ಸಮೂಹ ಮಾಧ್ಯಮಗಳೆಂದು ಹೆಸರು. ಇಂತಹ ಸಮಾಜಗಳ ಉದ್ದಗಲಗಳಿಗೂ ವ್ಯಾಪಿಸಿ ನಗರಗಳಿಂದ ಬಹುದೂರ ಉಳಿದು ಗ್ರಾಮೀಣ ಜನರು ತಮ್ಮ ಬದುಕನ್ನು ಅರಣ್ಯ ಮತ್ತು ಬೆಟ್ಟ ಗುಡ್ಡಗಳ ಸಮೀಪದಲ್ಲಿ ತಮ್ಮ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಂಡಿದ್ದಾರೆ. ಆದ್ದರಿಂದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿಗೆ ಸಂಬಂಧಿಸಿದಂತೆ ಪ್ರಮುಖ ಬುಡಕಟ್ಟು ಆದ 'ಮಾದಿಗ' ಸಮುದಾಯ ಬುಡಕಟ್ಟನ್ನು ಕುರಿತಂತೆ ವಿವರಣಾತ್ಮಕವಾಗಿ ಅಧ್ಯಯನ ಮಾಡಲಾಗಿದೆ. ಜೊತೆಗೆ ಅಧ್ಯಯನದ ಉದ್ದೇಶವು ಇಡೀ ಸಮುದಾಯದ ಸಂಸ್ಕೃತಿಯನ್ನು ಆಚರಣಾತ್ಮಕ ಹಿನ್ನಲೆಯಲ್ಲಿ ನೋಡಲು ಪ್ರಯತ್ನಿಸಲಾಗಿದೆ.

೧.೨ ಉದ್ದೇಶ

ಮೂಲತಃ ಈ ಸಮುದಾಯಕ್ಕೂ ಇತರೆ ಎಲ್ಲಾ ಸಮುದಾಯಗಳಂತೆ ಕೃಷಿ ಪ್ರಧಾನ ಕಸುಬಾಗಿತ್ತು. ಈ ಕಸುಬನ್ನು ಆದಿಮ ಕಾಲದಿಂದಲೂ ಈಗಿನ ಕಾಲದವರೆಗೆ ಮುಂದುವರೆಸಿಕೊಂಡು ಬರಲಾಗುತ್ತಿದೆ. ಇಲ್ಲಿಯವರೆಗೆ ನಡೆದ ಎಲ್ಲಾ ಅಧ್ಯಯನಗಳನ್ನು ಗಮನಿಸಿದ್ದೇನೆ. ನಾನು ಗಮನಿಸಿದ ಅಧ್ಯಾಯಗಳಲ್ಲಿ ಹೆಚ್ಚಾಗಿ ಜಿಲ್ಲೆಗಳನ್ನು ಒಳಗೊಂಡ ಅಧ್ಯಯನಗಳಾಗಿವೆ. ಮತ್ತು ಪರಿಚಯಾತ್ಮಕವಾಗಿ ನಡೆದಿವೆ.

ಇದುವರೆಗೆ ನಡೆದ ಎಲ್ಲಾ ಅಧ್ಯಯನಗಳಿಗಿಂತ ಸಂಸ್ಕೃತಿಯ ಅಧ್ಯಯನಗಳು ಹೆಚ್ಚು ಮಹತ್ವ ಪಡೆಯುತ್ತಿವೆ. ಸಮುದಾಯಗಳ ಬದುಕನ್ನು ಹೊರಗಿನ ಆಯಾಮಗಳಿಂದ ಗುರುತಿಸುವುದಕ್ಕಿಂತ ಒಳಗಿನ ಆಯಾಮಗಳ ಮೂಲಕ ಗುರುತಿಸುವುದು ಸೂಕ್ತ. ಆದ್ದರಿಂದ ಇಂದು ದೇಶವನ್ನು ಮತ್ತು ದೇಶೀಯ ಬದುಕನ್ನು ಪಾಶ್ಚಾತ್ಯ ಮಾನದಂಡಗಳಿಂದ ಗ್ರಹಿಸುವುದಕ್ಕಿಂತ ದೇಶೀಯ ನೆಲೆಯಲ್ಲಿ ಗ್ರಹಿಸುವುದು ಹೆಚ್ಚು ಸೂಕ್ತ. ನಮ್ಮ ದೇಶ ನಮ್ಮ ಸಂಸ್ಕೃತಿ ಎಂಬ ಮಾತುಗಳು ಮೇಲ್ನೋಟಕ್ಕೆ ಒಂದೇ ಅನ್ನಿಸಿದರೂ ಸೂಕ್ಷ್ಮವಾಗಿ ನೋಡಿದಾಗ ಅವು ಒಂದೇ ಅಲ್ಲ. ಹಗ್ಗದ ರಚನೆಯಂತೆ ಹಲವು ಎಳೆಗಳಿಂದ ಅವು ಒಂದೇ ಎನಿಸುತ್ತವೆಯಷ್ಟೆ. ಹಾಗೆ ನೋಡಿದರೆ, ಪ್ರಧಾನ ಧಾರೆಯ ಅಧ್ಯಯನವೇ ಬಹುಮುಖ್ಯವಾಗಿದ್ದ ಈ ನೆಲದಲ್ಲಿ ಉಪಧಾರೆಗಳ ಕುರಿತು ಅಧ್ಯಯನಗಳು ನಡೆದಿಲ್ಲ. ಅಲಕ್ಷಿತ ಗುಂಪುಗಳು ಬುಡಕಟ್ಟುಗಳು ಅಕ್ಷರ ಲೋಕದಿಂದ ಬಹುದೂರ ಉಳಿದಿದ್ದ ಕಾಲ ಒಂದಿತ್ತು. ಆದರೆ ಈ ಸ್ಥಿತಿ ಬದಲಾಗಿ ಅಲ್ಲಿನ ಲೋಕಗಳು ಶ್ರೇಷ್ಠ ಅನಿಸಿಕೊಂಡ ಸಮಾಜಗಳಿಗೆ ಸವಾಲಾಗತೊಡಗಿದೆ. 'ಉಪಸಂಸ್ಕೃತಿ', 'ಪರ್ಯಾಯ ಸಂಸ್ಕೃತಿ' ಎಂದೆಲ್ಲಾ ಕರೆಯಿಸಿಕೊಂಡು ಈ ಬುಡಕಟ್ಟುಗಳು ಕೂಡ ಹತ್ತು ಹಲವು ದೃಷ್ಟಿಗಳಿಂದ ಮಹತ್ವ ಪಡೆದಿವೆ.

ಆದ್ದರಿಂದ ಯಾವುದೇ ಒಂದು ಸಮುದಾಯ ಅಥವಾ ಸಮಾಜವನ್ನು ಒಂದುಗೂಡಿಸುವ ಶಕ್ತಿಯನ್ನು ಸಂಪ್ರದಾಯ ಆಚರಣೆಗಳು ಮಾಡುತ್ತವೆ. ಸಮುದಾಯವು ಆದಿಮ ಕಾಲದಿಂದಲೂ ದೈನಂದಿನ ಚಟುವಟಿಕೆಗಳನ್ನು ರೂಢಿಸಿಕೊಂಡು ಬಂದಿರುವ ಒಂದು ನಿರ್ದಿಷ್ಟ ಸ್ಥಳದಲ್ಲಿ ನಡೆಯುವ ಕಾರ್ಯ ಅಥವಾ ಕ್ರಿಯೆ. ಇದು ಕೇವಲ ಒಬ್ಬ ವ್ಯಕ್ತಿಯಿಂದ ಸೃಷ್ಟಿಯಾದುದಲ್ಲ. ಸಾಮೂಹಿಕ ಸೃಷ್ಟಿ. ಮತ್ತು ಅದು ಆಯಾ ಜನಾಂಗದ ಜೀವನ ವಿಧಾನ, ಬೇಡಿಕೆಯ ಅಂಗವಾಗಿ ಹುಟ್ಟಿಕೊಂಡ ಸಮುದಾಯವಾಗಿದೆ. ಅಥವಾ ರೂಪು ಪಡೆಯುತ್ತಿದೆ. ಇವು ಮಾನವನ ಜೀವನದ ಅವಿಭಾಜ್ಯ ಅಂಗವಾಗಿ ಅವನ ಬದುಕನ್ನು ರೂಪಿಸುವ ಮತ್ತು ಸಂಸ್ಕೃತಿಯನ್ನು ಪೋಷಣೆ ಮಾಡುವುದರಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಆದ್ದರಿಂದಲೇ ಮಾನವನು ವರ್ಷಪರ್ಯಂತ ದುಡಿದು, ದಣಿದು ಅದರಿಂದ ವಿರಾಮ ಪಡೆಯಲು ಅಥವಾ ವಿಶ್ರಾಂತಿ ಪಡೆಯಲು ತಮ್ಮ ಇಡೀ ಸಮುದಾಯದ ಸಂಸ್ಕೃತಿಯನ್ನು ಆಚರಣಾತ್ಮಕವಾಗಿ ಅಥವಾ ಆಚರಣೆಯ ಮುಖಾಂತರ ಆಚರಿಸಿಕೊಂಡು ಬಂದಿದ್ದಾರೆ. ಪ್ರಸ್ತುತ ನನ್ನ ಅಧ್ಯಯನದ ಉದ್ದೇಶಕ್ಕಾಗಿ ಮೊಳಕಾಲ್ಮೂರು ಪರಿಸರದ ಮಾದಿಗ ಸಮುದಾಯದ ಆಚರಣೆಗಳು ಎಂಬುದರ ಕುರಿತು ಚರ್ಚಿಸಲು ಪ್ರಯತ್ನಿಸಿದ್ದೇನೆ.

ಆಂಧ್ರ ಮತ್ತು ಕರ್ನಾಟಕದ ಗಡಿಭಾಗದಲ್ಲಿರುವ ಮೊಳಕಾಲ್ಮೂರು ಪರಿಸರ ಹೆಚ್ಚಿನ ಭೌಗೋಳಿಕ ವ್ಯತ್ಯಾಸಗಳೇನಿಲ್ಲದೆ ಒಂದೇ ತೆರನಾಗಿದೆ. ರಾಯಲಸೀಮೆ ಮತ್ತು ಬಯಲು ಸೀಮೆಗಳ ಬೆಟ್ಟ, ಗುಡ್ಡ, ಬಯಲು ಹಾಗೂ ಕುರುಚಲು ಕಾಡುಗಳಲ್ಲಿ ಅರಳಿರುವ ಸಂಸ್ಕೃತಿಯ ವಕ್ತಾರರು ತಳ ಸಮುದಾಯದವರೆಂದರೆ ತಪ್ಪಾಗಲಾರದು. ಅದರಲ್ಲಿ ಮಾದಿಗ ಸಮುದಾಯವು ಒಂದಾಗಿದೆ. ತನ್ನ ಮೂಲ ಸಂಸ್ಕೃತಿ, ಕನ್ನಡ ಭಾಷೆಯ ಮೂಲದ ಸೊಗಡನ್ನು, ಅಪರೂಪದ ನುಡಿಗಟ್ಟುಗಳನ್ನು ಜಾನಪದದ ಬನಿಯನ್ನು ಜತನದಿಂದ ಕಾಪಾಡಿಕೊಂಡು ಬಂದ ಸಮುದಾಯವಾಗಿದೆ. ಬಹುಶಃ ಈ ಸಮುದಾಯವು ಅಸ್ಪೃಶ್ಯತೆಯ ಕಾರಣದಿಂದಾಗಿ ಪ್ರತ್ಯೇಕ ದ್ವೀಪದಂತುಳಿದು ಸಂಸ್ಕೃತೀಕರಣಕ್ಕೆ, ಆಧುನೀಕರಣಕ್ಕೆ ಅಷ್ಟಾಗಿ ಪಕ್ಕಾಗದೇ ಇರುವುದು ಕಾರಣವಾಗಿರಬಹುದೆನಿಸುತ್ತದೆ. ಇಂತಹುದೊಂದು ಸಮುದಾಯವೊಂದರ ಅಧ್ಯಯನ ಹೊಸ ಬಗೆಯ ಗ್ರಹಿಕೆಗಳಿಗೆ, ಅರ್ಥೈಕೆಗಳಿಗೆ, ಭಿನ್ನ ಬಗೆಯ ವ್ಯಾಖ್ಯಾನಗಳಿಗೆ ಕಾರಣವಾಗಬಹುದೆಂಬ ಉದ್ದೇಶವೂ ಪ್ರಸ್ತುತ ಅಧ್ಯಯನಕ್ಕಿದೆ.

### ೧.೩ ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನದ ವ್ಯಾಪ್ತಿಯನ್ನು ಚಿತ್ರದುರ್ಗ ಜಿಲ್ಲೆಯಲ್ಲಿ ಬರುವ ಗುಡ್ಡ ಗಾಡುಗಳಿಂದ ಆವೃತಗೊಂಡಿರುವ ಮೊಳಕಾಲ್ಮೂರು ತಾಲ್ಲೂಕನ್ನು ಸಂಶೋಧನೆಯ ಕ್ಷೇತ್ರಕ್ಕೆ ಬಳಸಿಕೊಳ್ಳುತ್ತೇನೆ. ಆದ್ದರಿಂದ ವ್ಯಾಪ್ತಿಯನ್ನು ಈ ತಾಲ್ಲೂಕಿಗೆ ಮಾತ್ರ ಸೀಮಿತಗೊಳಿಸಿಕೊಂಡಿದ್ದೇನೆ. ಮೊಳಕಾಲ್ಮೂರು ತಾಲ್ಲೂಕು ಚಿತ್ರದುರ್ಗ ಜಿಲ್ಲೆಯ ತಾಲ್ಲೂಕು ಕೇಂದ್ರ. ಈ ಪ್ರದೇಶ ತುಂಬಾ ಹಿಂದುಳಿದ ಪ್ರದೇಶವಾಗಿದೆ. ಈ ಪ್ರದೇಶವು ಉತ್ತರ ಅಕ್ಷಾಂಶದಿಂದ ಹಿಡಿದು ಪೂರ್ವ ರೇಖಾಂಶದವರೆಗೆ ವ್ಯಾಪಿಸಿಕೊಂಡಿದೆ, ಅಥವಾ ಹರಡಿಕೊಂಡಿದೆ. ಇಲ್ಲಿ ಬಹುತೇಕ ಹೆಚ್ಚು ಜನರು ಮಳೆಯನ್ನೇ ಅವಲಂಬಿಸಿದ್ದಾರೆ. ಹಾಗೂ ಕೂಲಿಯಿಂದ ಜೀವನ ನಡೆಸುತ್ತಿದ್ದಾರೆ. ಅಲ್ಪ ಪ್ರಮಾಣದ ಜಮೀನನ್ನು ಹೊಂದಿದ್ದು ವರ್ಷದಲ್ಲಿ ಆರು ತಿಂಗಳು ಊರಲ್ಲಿ ಇದ್ದರೆ, ಉಳಿದ ದಿನಗಳಲ್ಲಿ ಹೆಚ್ಚಾಗಿ ವಲಸೆ ಹೋಗುತ್ತಾರೆ. ಈ ಅತಂತ್ರ ಸ್ಥಿತಿಯಲ್ಲಿ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ.

ಸಾಮಾಜಿಕ ಸ್ಥಾನಮಾನದಲ್ಲಿ ಮಾದಿಗರನ್ನು ಅತ್ಯಂತ ಕೆಳಸ್ತರದಲ್ಲಿ ಇಡುತ್ತಾರೆ. ಹೊಲೆಯರಂತೆ ಇವರನ್ನು ಸಹ ಮೇಲ್ವರ್ಗದವರು ಮುಟ್ಟಿಸಿಕೊಳ್ಳುವುದಿಲ್ಲ. ಇವರೂ ಸಹ ಭಾರತೀಯ ವರ್ಣವ್ಯವಸ್ಥೆಯ ಪ್ರಕಾರ ಶ್ರೇಷ್ಠವಾಗಿರುವ ಬ್ರಾಹ್ಮಣರನ್ನು ತಮ್ಮ ಕೇರಿಯಲ್ಲಿ ಬರಗೊಡುವುದಿಲ್ಲ. ಒಂದು ವೇಳೆ ಏನಾದರೂ ಬಂದರೆ ಅವರನ್ನು 'ಛೀ... ಹುಚ್ಚು ನಾಯಿ' ಎಂದು ಬೈದು ಕಳಿಸುತ್ತಾರೆ. ವರ್ಷವೊಂದರ ಕಾಲಾವಧಿಯಲ್ಲಿ ಬರುವಂತಹ ಆಚರಣೆಗಳೇ ವಾರ್ಷಿಕಾವರ್ತನ ಆಚರಣೆಗಳು. ಇಂತಹ ಆಚರಣೆಗಳ ಸಂದರ್ಭದಲ್ಲಿ ಹೆಣ್ಣುಮಕ್ಕಳು ಹಾಡುಗಳನ್ನು ಹಾಡುತ್ತಾರೆ. ಹಲವು ಕಲೆಗಳನ್ನು ಪ್ರದರ್ಶಿಸುತ್ತಾರೆ. ಇಂತಹ ಹಾಡು, ಕಲೆ, ಪ್ರದರ್ಶನ ಎಲ್ಲವೂ ಅವರ ಜೀವನ ವಿಧಾನ, ಒಟ್ಟಾರೆ ಸಾಂಸ್ಕೃತಿಕ ಆಶಯಗಳ ಅಭಿವ್ಯಕ್ತಿಯಾಗಿದೆ. ನಂತರ ಯುಗಾದಿ ಸಂದರ್ಭದಲ್ಲಿ ಸಹ ಕೆಲವೊಂದು ಆಚರಣೆಗಳನ್ನು ಮಾಡುತ್ತಾರೆ. ನಂತರ ದೀಪಾವಳಿ ಅಮಾವಾಸ್ಯೆಯ ದಿವಸ ಸಹ ಎಲ್ಲಾ

ಸಮುದಾಯದವರು ಆಚರಿಸುತ್ತಾರೆ. ಹೀಗೆ ವಾರ್ಷಿಕಾವರ್ತನದಲ್ಲಿ ವರ್ಷದಲ್ಲಿ ಬರುವಂತಹ ಎಲ್ಲಾ ಹಬ್ಬ ಹರಿದಿನ, ಜಾತ್ರೆ, ಉತ್ಸವ, ಮುಂತಾದವುಗಳನ್ನು ಇಲ್ಲಿ ಕಾಣಬಹುದು. ನಂತರ ಜೀವನಾವರ್ತನ ಆಚರಣೆಗಳಲ್ಲಿ ಗ್ರಾಮದ ಜನರ ಜೀವನವನ್ನು ಮತ್ತು ಸುಖ ಸಂತೋಷವನ್ನು ಸಿಹಿ ಕಹಿಯನ್ನು ಅಭಿವ್ಯಕ್ತಿಸುವ ಆಚರಣಾರೂಪಗಳಲ್ಲಿ ಅವರ ಜೀವನ ವಿಧಾನ ಮತ್ತು ನಂಬಿಕೆಗಳ ಅಭಿವ್ಯಕ್ತಿಯನ್ನು ಕಾಣಬಹುದು. ಪ್ರತಿಯೊಂದು ಮನೆಯಲ್ಲಿ ಮಗು ಹುಟ್ಟಿದಂದಿನಿಂದ ಸಾವಿನವರೆಗೂ ಕೆಲವು ಆಚರಣೆಗಳನ್ನು ಆಚರಿಸುತ್ತಾರೆ. ಮದುವೆಯ ಸಂದರ್ಭದಲ್ಲಿಯೂ ಇಂತಹ ಆಚರಣೆಗಳನ್ನು ಈ ಸಮುದಾಯದಲ್ಲಿ ಕಾಣಬಹುದು. ಯಾವುದೇ ಒಂದು ವಿಷಯವನ್ನು ತೆಗೆದುಕೊಂಡಾಗ ಅಲ್ಲಿ ಬರುವಂತಹ ಕಷ್ಟ, ಸುಖ, ದುಖಃ ಮುಂತಾದವುಗಳನ್ನು ಸಹಿಸಿಕೊಂಡು ಜೀವನವನ್ನು ಮಾಡುವುದು ಮನುಷ್ಯನ ಕರ್ತವ್ಯವಾಗಿದೆ. ಆದ್ದರಿಂದ ಈ ಸಮುದಾಯದಲ್ಲಿ ಬಹಳ ಬಡತನದಿಂದ ಕೂಡಿದಂತಹ ಜನ ಸಮೂಹ ಆಗಿದೆ.

**ಅಧ್ಯಯನದ ವೈಧಾನಿಕತೆ**

ಸಂಶೋಧನೆಯ ವಿಷಯವಾಗಿರುವ ಮೊಳಕಾಲ್ಮೂರು ಪರಿಸರದ ಮಾದಿಗ ಸಮುದಾಯದ ಆಚರಣೆಗಳು ಎಂಬ ವಿಷಯವನ್ನು ಪ್ರಬಂಧದ ರೂಪದಲ್ಲಿ ಮಂಡಿಸಲು ಈ ಕೆಳಗಿನ ಸಂಶೋಧನ ವಿಧಾನವನ್ನು ಅನುಸರಿಸಲು ಬಂದಿದ್ದೇನೆ.

**ಎ. ಪ್ರಶ್ನಾವಳಿ**

ಸಂಶೋಧನೆಗಾಗಿ ನಾನು ಆಯ್ದುಕೊಂಡ ಕ್ಷೇತ್ರದಲ್ಲಿ ವಿಷಯಕ್ಕೆ ಸಂಬಂಧಿಸಿದಂತೆ ವೈಜ್ಞಾನಿಕವಾಗಿ ಮಾಹಿತಿ ಸಂಗ್ರಹಿಸಲು, ಈ ಪರಿಸರದ ಮಾದಿಗ ಸಮುದಾಯದ ಎಲ್ಲಾ ಹಿರಿಯ ಅನುಭವಸ್ಥರಿಂದ ವಿವರಗಳನ್ನು ಪಡೆಯಲು ಪ್ರಶ್ನಾವಳಿಯನ್ನು ಸಿದ್ಧಪಡಿಸಲಾಗುವುದು.

**ಬಿ. ಅವಲೋಕನ**

ಮೇಲಿನ ಪ್ರಶ್ನಾವಳಿಯಿಂದ ಪಡೆದ ಉತ್ತರಗಳನ್ನು ಮೌಖಿಕ ಹಿನ್ನೆಲೆಯಲ್ಲಿ ಸೂಕ್ಷ್ಮವಾಗಿ ಅವಲೋಕಿಸಲಾಗುವುದು.

**ಸಿ. ಸಂದರ್ಶನ ವಿಧಾನ**

ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಪ್ರಶ್ನಾವಳಿಯನ್ನು ಒಳಗೊಂಡಂತೆಯೇ ಸಂದರ್ಶನ ವಿಧಾವನ್ನು ಸಹ ಬಳಸಿಕೊಳ್ಳಲಾಗುವುದು.

**ಡಿ. ಸಾಮಾಗ್ರಿಗಳು**

ಸಂಶೋಧನೆಯ ಸಮಯದಲ್ಲಿ ಮಾಹಿತಿಯ ಸಂಗ್ರಹಣೆಗಾಗಿ ಸಂಶೋಧನಾ ಸಾಮಾಗ್ರಿಗಳಾದಂತಹ ಕ್ಯಾಮರಾ, ಟೇಪ್‌ರೆಕಾರ್ಡರ್ ಮೊದಲಾದ ಸಲಕರಣೆಗಳನ್ನು ಬಳಸಲಾಗುವುದು.

**ಮೊ**ಳಕಾಲ್ಮೂರು ಎಂಬ ಹೆಸರು "ಮೊಳಕಾಲ್ಮುರು" ಜಲಸಸ್ಯದಿಂದ ಬಂದಿರಬಹುದು. ಅಲ್ಲದೆ ಈ ಊರಿನ ಉತ್ತರಕ್ಕಿರುವ ಬೆಟ್ಟದ ಮೇಲಿನ ಕೋಟೆಯನ್ನು ವಶಪಡಿಸಿಕೊಳ್ಳಲು ಶತ್ರುಗಳು ಬಂದಾಗ ಕೋಟೆ ಕಾವಲಿಗಿರುವ ಸೈನಿಕರು ಅಲ್ಲಿನ ಕಡಿದಾದ ಹಾಸು ಬಂಡೆಗಳ ಮೇಲೆ ಎಣ್ಣೆ ಮತ್ತು ರಾಗಿಯನ್ನು ಸುರಿದಿದ್ದರಿಂದ ಶತ್ರು ಸೈನಿಕರು ಕಡಿದಾದ ಬಂಡೆಯನ್ನು ಹತ್ತಲಾಗದೆ. ಜಾರಿಕೊಂಡು ಮೊಣಕಾಲು ಮುರಿಯುವಂತೆ ಬಿದ್ದಿದ್ದರಿಂದ ಈ ಊರಿಗೆ ಮೊಣಕಾಲು ಮುರಿ, ಮೊಳಕಾಲ್ಮುರಿ, ನಂತರ ದಿನಗಳಲ್ಲಿ 'ಮೊಳಕಾಲ್ಮುರು' ಎಂಬ ಹೆಸರು ಬಂದಿದೆ ಎಂಬ ಸ್ಥಳೀಯ ಐತಿಹ್ಯವಿದೆ. ಆದರೆ ಮೇಲಿನ ಹೇಳಿಕೆಗಳಿಗೆ ಯಾವುದೇ ರೀತಿಯ ಪುರಾತತ್ವೀಯ ಅಥವಾ ಸಾಹಿತ್ಯಿಕ ಆಧಾರಗಳಿಲ್ಲ. ಇಂದು ಮೊಳಕಾಲ್ಮುರು ಚಿತ್ರದುರ್ಗ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿದ್ದು ಈ ತಾಲ್ಲೂಕು ಜಿಲ್ಲೆಯ ಈಶಾನ್ಯ ಭಾಗದಲ್ಲಿ ಒಂಟೆ ಅಥವಾ ಜಿರಾಫೆಯ ಕತ್ತಿನಂತೆ ಉದ್ದಕ್ಕೆ ಚಾಚಿಕೊಂಡಿದೆ.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ಪ್ರದೇಶವನ್ನು ಸೂಕ್ಷ್ಮ ಅಧ್ಯಯನಕ್ಕಾಗಿ (Micro Study) ಆಯ್ದುಕೊಳ್ಳಲಾಗಿದೆ. ಚಿತ್ರದುರ್ಗ ಜಿಲ್ಲೆಯ ಈಶಾನ್ಯ ಭಾಗದಲ್ಲಿರುವ ಈ ತಾಲ್ಲೂಕು ಪರಿಸರವು ಸುತ್ತ ಮುತ್ತಲಿರುವ ಪ್ರದೇಶದಲ್ಲಿ ಬೇರೆ ಪರಿಸರಕ್ಕಿಂತ ಭಿನ್ನವಾಗಿಲ್ಲ. ಈ ಪ್ರದೇಶದ ತುಂಬೆಲ್ಲಾ ಗ್ರಾನೈಟ್ ಶಿಲೆಯ ಬೆಟ್ಟಗುಡ್ಡಗಳಿವೆ. ಈ ಬೆಟ್ಟದಲ್ಲಿ ನೀರಿನ ತಾಣಗಳು ನೈಸರ್ಗಿಕ ಗವಿಗಳು, ಕಲ್ಲಾಸರೆಗಳು ಅಧಿಕ ಪ್ರಮಾಣದಲ್ಲಿದ್ದು ಇವು ಪ್ರಾಚೀನ ಮಾನವನ ವಾಸ್ತವ್ಯಕ್ಕೆ ಅನುಕೂಲವಾಗಿದ್ದವು. ಮೊಳಕಾಲ್ಮುರು ತಾಲ್ಲೂಕಿನ ಸುತ್ತಮುತ್ತಲಿನ ಪ್ರದೇಶದ ಹಲವಾರು ನೆಲೆಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಅನೇಕ ಪ್ರಾಚ್ಯ ಅವಶೇಷಗಳು ದೊರೆತಿವೆ. ಈ ತಾಲ್ಲೂಕಿನ ಉತ್ತರ ಭಾಗದಲ್ಲಿರುವ ಸಂಗನಕಲ್ಲು, ತೆಕ್ಕಲಕೋಟೆ, ಹಲಕುಂದಿ, ಕಪ್ಪಗಲ್ಲು, ಕೊನಬೇವು, ಚಿಪ್ಪನ ಕೆರೆ ಹಾಗೂ ಪೂರ್ವದಲ್ಲಿರುವ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲ್ಲೂಕಿನ ಶಿಲಾಯುಗದ ಮಾನವನ ಕುರುಹುಗಳು ದೊರೆತಿವೆ. ನಂತರ ಹಲವಾರು ಜನರು ತನ್ನ ಜೀವನವನ್ನು ಕೂಲಿಯಿಂದ ಜೀವನವನ್ನು ನಡೆಸುತ್ತಿದ್ದರು. ತದನಂತರ ಈ ಸಮುದಾಯದವರು ಹೆಚ್ಚಾಗಿ ವ್ಯವಸಾಯವನ್ನು ಮುಖ್ಯ ಕಸುಬನ್ನಾಗಿಸಿಕೊಂಡಿದ್ದರು. ಹಾಗೂ ಈ ತಾಲ್ಲೂಕಿನಲ್ಲಿ ಕಟ್ಟಿಗೆಯನ್ನು ಗುಡ್ಡದಿಂದ ಒತ್ತುಕೊಂಡು ಬಂದು ಅದನ್ನು ಮಾರಿ ಜೀವನವನವನ್ನು ಸಾಗಿಸುತ್ತಾರೆ. ಅವರ ಜೀವನ ಬಹಳ ಕಷ್ಟಕರವಾಗಿದೆ.

ಮೊಳಕಾಲ್ಮುರು ಚಿತ್ರದುರ್ಗ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಈ ಪ್ರದೇಶವು ಅನಾವೃಷ್ಟಿ ಅಭಾವಗಳಿಗೆ ಹೆಸರಾದ ಹಿಂದುಳಿದ ತಾಲ್ಲೂಕು ಆಗಿದೆ. ಈ ಒಂದು ತಾಲ್ಲೂಕಿನಲ್ಲಿ ಉತ್ತರ ಅಕ್ಷಾಂಶ ೧೪.೪ರಿಂದ ೧೫.೨ ಮತ್ತು ಪೂರ್ವ ರೇಖಾಂಶ ೭೬.೪೧ರಿಂದ ೭೭.೦೧ ರವರೆಗೆ ಚಾಚಿಕೊಂಡಿದೆ. ಈ ತಾಲ್ಲೂಕಿನ ಪೂರ್ವಕ್ಕೆ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲ್ಲೂಕು, ಪಶ್ಚಿಮ ಮತ್ತು ಉತ್ತರಕ್ಕೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕು ಸಂಡೂರು ತಾಲ್ಲೂಕುಗಳನ್ನು ಹಾಗು ದಕ್ಷಿಣಕ್ಕೆ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕುಗಳನ್ನು ಮೇರೆಗಳನ್ನಾಗಿ ಹೊಂದಿದೆ. ಈ ತಾಲ್ಲೂಕಿನ ವಿಸ್ತೀರ್ಣವು ೭೩೭ ಚದರ ಕಿಲೋಮೀಟರುಗಳು. ಈ ತಾಲ್ಲೂಕು ಒಟ್ಟು ೯೧ ಗ್ರಾಮಗಳನ್ನು ಹೊಂದಿದ್ದು ೭೫ ಗ್ರಾಮಗಳಲ್ಲಿ ಮಾದಿಗರ ಜನವಸತಿ ಇದೆಯೆಂದು ಹೇಳಬಹುದು. ಈ ಪ್ರದೇಶವು ಬಯಲು ಸೀಮೆಗೆ ಸೇರಿದ ಪ್ರದೇಶವಾಗಿದ್ದರಿಂದ ಇಲ್ಲಿಯ ಮಳೆಯ ಪ್ರಮಾಣ ಕಡಿಮೆಯಾಗಿ ತೀವ್ರ ನೀರಿನ ಅಭಾವ ಪರಿಸ್ಥಿತಿಯನ್ನು ಎದುರಿಸುತ್ತಿದ್ದೆ. ಬಿಸಿಲಿನ ತಾಪಮಾನವು ಹೆಚ್ಚಾಗಿ ಕಂಡು ಬರುತ್ತದೆ. ಈ ತಾಲ್ಲೂಕಿನಲ್ಲಿ ಯಾವುದೇ ದೊಡ್ಡ ನದಿಗಳು ಹರಿಯದಿದ್ದರೂ ತುಂಗಭದ್ರನದಿಯ ಮುಖ್ಯ ಉಪನದಿಯಾದ ಜನಗೆನ ಹಳ್ಳ (ಸಣ್ಣಹಗರಿ) ಹರಿಯುತ್ತದೆ. ಈ ನದಿಯನ್ನು 'ಅಘಹಾರಿ' ಅಥವಾ 'ಪಾಪನಾಶಿನಿ-

ಎಂಬ ಹೆಸರುಗಳಿಂದ ಕರೆಯುತ್ತಾರೆ. ಚಿನ್ನ ಹಗರಿ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನಲ್ಲಿ ಹುಟ್ಟಿ ಜನಗನ ಹಳ್ಳಿ ಎಂಬ ಹೆಸರಿನಿಂದ, ಚಿತ್ರದುರ್ಗ, ಜಗಳೂರು, ಮೊಳಕಾಲ್ಮುರು ತಾಲ್ಲೂಕುಗಳಲ್ಲಿ ಹರಿದು ಅನೇಕ ಅನೇಕ ಕೆರೆಗಳಿಗೆ ಜಲ ಮೂಲವಾಗಿದ್ದು ಮುಂದೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕನ್ನು ಪ್ರವೇಶಿಸಿ ಮೊಳಕಾಲ್ಮುರು ಪ್ರದೇಶದಲ್ಲಿ ಹರಿದು ಆಂಧ್ರಪ್ರದೇಶವನ್ನು ಸೇರುತ್ತದೆ. ಈ ನದಿಗೆ ರಂಗಯ್ಯನದುರ್ಗ ಜಲಾಶಯ ಎಂದು ಹೆಸರಿಟ್ಟು, ಅದಕೊಂದು ಅಣೆಕಟ್ಟನ್ನು ನಿರ್ಮಿಸಿದರು. ಎಂದು ಹೇಳಬಹುದು. ಈ ಜಲಾಶಯದಿಂದ ಕೆಲವು ಕೆರೆಗಳಿಗೆ ನೀರು ಸರಬರಾಜಾಗಿ ನೀರಾವರಿ ವ್ಯವಸ್ಥೆಯಿಂದ ಕೆಲವೊಂದು ಹಳ್ಳಿಗಳಿಗೆ ಉಪಯುಕ್ತವಾಗಿದೆ. ನಂತರ ಮುಂದುವರೆದು ಆ ಜಲಾಶಯದ ಸುತ್ತಮುತ್ತಲಿರುವ ಹೊಲಗಳಿಗೆ ನೀರು ಸರಬರಾಜಾಗಿ ಅಲ್ಲಿ ಕೆಲವು ಬೆಳೆಗಳನ್ನು ರೈತರು ತೆಗೆಯುತ್ತಾರೆ. ಅಲ್ಲಿ ಹೆಚ್ಚಾಗಿ ಬೆದ್ದಲು (ಮಳೆಯಾಶ್ರಿತ ಜಮೀನು) ಭೂಮಿಯಾಗಿರುತ್ತದೆ. ನಂತರ ರಾಂಪುರದ ಬಳಿ ಇರುವ ಗಂಡಾರಹಳ್ಳ ಇದೆ. ಇದು ಮಳೆಗಾಲದ ಸಮಯದಲ್ಲಿ ಮಾತ್ರ ತುಂಬಿ ಹರಿದು ಆಂಧ್ರಕ್ಕೆ ಸೇರುತ್ತದೆ. ಆದ್ದರಿಂದ ಈ ತಾಲ್ಲೂಕಿನಲ್ಲಿ ಅಂತರ್ಜಲ ಸಂಪತ್ತು ಇರುವುದರಿಂದ ಇಲ್ಲಿನ ರೈತರು ಪಂಪ್‌ಸೆಟ್‌ಗಳ ಸಹಾಯದಿಂದ ವ್ಯವಸಾಯಕ್ಕೆ ನೀರನ್ನು ಬಳಸಿಕೊಂಡಿದ್ದಾನೆ. ಇಲ್ಲಿನ ಭೂಮಿ ಕಪ್ಪುಮಿಶ್ರಿತ ಕೆಂಪು ಮಣ್ಣು, ಜೌಳುಮಣ್ಣಿನಿಂದ ಕೂಡಿರುವುದನ್ನು ಕಾಣಬಹುದು. ಇಲ್ಲಿ ಮುಖ್ಯವಾಗಿ ಜೋಳ, ಹತ್ತಿ, ಶೇಂಗಾ, ಈರುಳ್ಳಿ ಬೆಳೆಗಳನ್ನು ಬೆಳೆಯುತ್ತಾರೆ. ನಂತರ ಮೊಳಕಾಲ್ಮುರು ಸಮೀಪದಲ್ಲೇ ಕೆಲವು ಮುಖ್ಯ ನದಿಗಳು ತುಂಬಿ ಹರಿಯುತ್ತವೆ. ಆ ನದಿಗಳೆಂದರೆ ವೇದಾವತಿ, ಚಿನ್ನಹಗರಿ ಈ ನದಿಗಳು ಮಳೆಗಾಲದ ಸಂದರ್ಭದಲ್ಲಿ ತುಂಬಿ ಹರಿಯುತ್ತವೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

**೧. ವೇದಾವತಿ ನದಿ**

ಇದು ಮೊಲಕಾಲ್ಮುರು ಸಮೀಪದಲ್ಲೇ ಅರಿದು ಹೋಗುವಂತಹ ನದಿ ಆಗಿದೆ. ಹಗರಿ ಎಂದು ಪರಿಚಿತವಾಗಿರುವ ಇದು ವೇದ ಮತ್ತು ಅವತಿಗಳೆಂಬ ಹೊಳೆಗಳು ಕಡೂರು ಬಳಿ ಕೂಡುವುದರಿಂದ ಅದು ವೇದಾವತಿ ನದಿ ಆಗುತ್ತದೆ. ತುಂಗಾಭದ್ರನದಿಯ ಉಪನದಿಯಾದ ಇದು ಮೂಲತಃ ಪಶ್ಚಿಮಘಟ್ಟಗಳ ಬಾಬಾಬುಡನ್‌ಗಿರಿಯ ತನ್ನ ಒಂದು ಶ್ರೇಣಿಯ ಮುಳ್ಳಯ್ಯನ ಗಿರಿಯ ತಳಭಾಗದಲ್ಲಿ ಜನಿಸುತ್ತದೆ. ಇದು ಚಿಕ್ಕ ಮಗಳೂರು, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲದೆ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿ ಹರಿದು ತುಂಗಭದ್ರನದಿಯನ್ನು ಸೇರುತ್ತದೆ. ಇದರ ಒಟ್ಟು ಉದ್ದ ೩೯೧ ಕಿ.ಮೀ.ಗಳಿದ್ದು ೨೩,೪೯೮ ಚ.ಕಿ.ಮೀ. ವಿಸ್ತೀರ್ಣದಷ್ಟು ಜಲಾನಯನ ಪ್ರದೇಶವನ್ನು ಹೊಂದಿದೆ. ಈ ನದಿಗೆ ಮಾರಿಕಣಿವೆ ಎಂಬಲ್ಲಿ 'ವಾಣಿವಿಲಾಸ ಸಾಗರ' ಎಂಬ ಜಲಾಶಯವನ್ನು ನಿರ್ಮಿಸಲಾಗಿದೆ. ಇದು ಬಹು ದೊಡ್ಡ ನದಿ ಆಗಿದೆ. ಎಂದು ತಿಳಿದು ಬರುತ್ತದೆ.

**ಚಿನ್ನಹಗರಿ**

ಹುಲ್ಲೂರು ಶ್ರೀನಿವಾಸ ಜೋಯಿಸರು ಈ ನದಿಯನ್ನು ಪಾಪ ವಿನಾಶಿನಿ ಎಂದು ಸಂಭೋದಿಸಿದ್ದಾರೆ. ಇದನ್ನು 'ಚಿನ್ನಹಗರಿ' ಚಿನ್ನ ಎಂದರೆ ತೆಲುಗಿನಲ್ಲಿ ಚಿಕ್ಕದು ಎಂಬರ್ಥವಿದೆ. ಇದನ್ನು ಜನ್ನಿಗಿ ಹಳ್ಳವೆಂದೂ ಸಹ ಕರೆಯಲಾಗುತ್ತದೆ. ಈ ನದಿಯು ಮೂಲತಃ ಹೊಳಲ್ಕೆರೆ ತಾಲ್ಲೂಕಿನ ಓಬಳೇಶ್ವರ ಗುಡ್ಡದಲ್ಲಿ ಹುಟ್ಟಿ ಚಿತ್ರಹಳ್ಳಿಯನ್ನು ತಲುಪಿ ಅಲ್ಲಿಂದ ನೈರುತ್ಯ ಈಶಾನ್ಯ ದಿಕ್ಕಿನಲ್ಲಿ ಹರಿಯುವಾಗ ಕೂಡ್ಲಿಗಿ ತಾಲ್ಲೂಕಿನ ಆಗ್ನೇಯ ಮತ್ತು ಪೂರ್ವದ ಗಡಿಯಾಗಿ ಮೊಳಕಾಲ್ಮೂರು ತಾಲ್ಲೂಕಿನ ಪಶ್ಚಿಮ ಗಡಿಯ ಉದ್ದಕ್ಕೂ ಹರಿದು ರಂಗಯ್ಯನ ಗುಡ್ಡದ ಜಲಾಶಯವನ್ನು ಸೇರುತ್ತದೆ. ಹೀಗೆ ಹರಿಯುವಾಗ ಕುಮತಿಯವರಿಗೆ ಜನ್ನಿಗಿ ಹಳ್ಳವೆಂದು ಅಲ್ಲಿಂದ ಮುಂದೆ ಚಿನ್ನ ಹಗರಿ ಎಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ಜಗಳೂರಿನಿಂದ ಹಿಡಿದು ಜರ್ಮಲಿ ಗುಡೇಕೋಟೆಯವರೆಗೆ ಹುದ್ದುಮಟ್ಟ, ಕಾನಾಮಡಗು, ಆಲೂರು, ಊಲಿಕೆರೆ, ಸಕಲಾಪುರದ ಹಟ್ಟಿ, ಖಾನಾಹೊಸಳ್ಳಿ, ಇಮ್ಮಡಾಪುರ, ಚಿಕ್ಕ ಜೋಗಿಹಳ್ಳಿ, ಕುರಿಹಟ್ಟಿ ಭೀಮಸಮುದ್ರ, ಕಾಟ್ರಹಳ್ಳಿ ಕಡೆಯ ಅನೇಕ ಚಿಕ್ಕ ಚಿಕ್ಕ ಹಳ್ಳಗಳು ಈ ನದಿಗೆ ಬಂದು ಸೇರುತ್ತವೆ.

ಮೊಳಕಾಲ್ಮೂರಿನ ಪೂರ್ವ ಶ್ರೇಣಿಯು ಕಣಶಿಲೆಯ ಬೆಟ್ಟ ಗುಡ್ಡಗಳಿಂದ ತುಂಬಿದ ಸಾಲಿನಂತೆ ಕಾಣುತ್ತದೆ. ಎಲ್ಲಾ ಬೆಟ್ಟಗಳು ನಗ್ನ ಶಿಲಾಮಯವಾಗಿವೆ. ಇವುಗಳಲ್ಲಿ ಮುಖ್ಯವಾಗಿ ಕೆಲವು ಬೆಟ್ಟಗಳನ್ನು ಈ ಕೆಳಗಿನಂತೆ ನೋಡಬಹುದು.

*ಜಟಂಗಿ ರಾಮೇಶ್ವರ ೩೪೬೯ ಅಡಿ

*ನುಂಕಭೈರವನ ಬೆಟ್ಟ ೩೦೨೨ ಅಡಿ

*ಜೋಗಪ್ಪನ ಗುಡ್ಡ ೨೯೩೬ ಅಡಿ

*ಈ ಬೆಟ್ಟಗಳನ್ನು ಇನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಬಹುದು. ಈ ಪ್ರದೇಶಗಳಲ್ಲಿ ಅಲೆದಾಡಿದ ಆಂಗ್ಲ ಇತಿಹಾಸಜ್ಞ 'ಬ್ರೂಸ್ ಪೂಟ್' ಎಂಬುವರು ಈ ಬೆಟ್ಟ ಗುಡ್ಡ ಪ್ರದೇಶಗಳನ್ನು ನೋಡಿ ಆಶ್ಚರ್ಯದಿಂದ ಮತ್ತು ಬಹಳ ಸೌಂದರ್ಯದಿಂದ ಕೂಡಿದೆ ಎಂದು ಹೇಳಿದರು. ಅಂದರೆ ಜಟಂಗಿ ರಾಮೇಶ್ವರದಲ್ಲಿ ೧೦೧ ಲಿಂಗಗಳನ್ನು ಅಲ್ಲಿ ಕಾಣಬಹುದು. ಏಕೆಂದರೆ ಆಗಿನ ಕಾಲದಲ್ಲಿ ಚಾಲುಕ್ಯರು ಆಳ್ವಿಕೆ ನಡೆಸಿದಂತಹ ಸ್ಥಳ ಆಗಿತ್ತು. ಏಕೆಂದರೆ, ಅಲ್ಲಿ ಬರುವಂತಹ ಪಾಂಡವರಿಗೂ ಮತ್ತು ಕೌರವರಿಗೂ ಯುದ್ಧದ ಸಂದರ್ಭದಲ್ಲಿ ಶಿಲೆಗಳನ್ನು ಕೆತ್ತನೆ ಮಾಡಲಾಗಿದೆ.

ಮೊಳಕಾಲ್ಮೂರು ಪ್ರದೇಶದಲ್ಲಿ ಸಂಪದ್ಭರಿತವಾದ ಅರಣ್ಯ ಸಂಪತ್ತಾಗಲೀ ಖನಿಜ ಸಂಪತ್ತಾಗಲೀ ಕಂಡುಬರುವುದಿಲ್ಲ. ಈ ತಾಲ್ಲೂಕಿನ ಜನ ಸಂಖ್ಯೆಯಲ್ಲಿ ಬಹುಸಂಖ್ಯಾತರು ಹಿಂದುಗಳಾಗಿದ್ದು, ಅವರಲ್ಲಿ ಹೆಚ್ಚಾಗಿ ಮಾದಿಗರ ಸಂಖ್ಯೆ ಕಂಡುಬರುತ್ತದೆ. ಆರ್ಥಿಕವಾಗಿ ಬಹಳ ಹಿಂದುಳಿದ ಜನತೆ ಹೆಚ್ಚಾಗಿ ಕಂಡುಬರುತ್ತಾರೆ. ಇಲ್ಲಿನ ಜನತೆಯ ಮುಖ್ಯ ಕಸುಬು ವ್ಯವಸಾಯವಾದರೂ ಸಹ ಕೂಲಿ ಮಾಡಿ ಜೀವನವನ್ನು ಜನರು ಸಾಗಿಸುತ್ತಾರೆ. ಅಂದರೆ ಅತೀ ಬರಗಾಲದ ಸಂದರ್ಭದಲ್ಲಿ ಬೇರೆ ಕಡೆ ವಲಸೆ ಹೋಗಿ ಜೀವನ ಮಾಡುವುದನ್ನು ನಾವು ಈ ತಾಲ್ಲೂಕಿನಲ್ಲಿ ಕಾಣಬಹುದು.

ಮೊಳಕಾಲ್ಮೂರು ತಾಲ್ಲೂಕು ೧೩೬ ಹಳ್ಳಿಗಳನ್ನು ಒಳಗೊಂಡಿದೆ. ಅಂದರೆ ಒಂದೊಂದು ಹಳ್ಳಿಗಳಲ್ಲಿ ಹಲವಾರು ಸಮುದಾಯಗಳು ಇರುತ್ತವೆ. ಹಾಗೂ ಬೇರೆ ಬೇರೆ ಜನಾಂಗದವರು ಸಹ ವಾಸಮಾಡುತ್ತಾರೆ. ಆದ್ದರಿಂದ ಯಾವುದೇ ಸಮುದಾಯವನ್ನು ತೆಗೆದುಕೊಂಡಾಗ ಮೊಲಕಾಲ್ಮೂರು ತಾಲ್ಲೂಕು ಹಿಂದುಳಿದ ಪ್ರದೇಶವಾಗಿದೆ. ಏಕೆಂದರೆ ಈ ಭಾಗದಲ್ಲಿ ಮಳೆಯಾಶ್ರಿತ ವ್ಯವಸಾಯ ಕ್ಷೇತ್ರಗಳಿರುವುದರಿಂದ ರೈತನ ಆರ್ಥಿಕ ಸ್ಥಿತಿ ಅಷ್ಟಕಷ್ಟೆ. ನಂತರ ಮೊಳಕಾಲ್ಮೂರು ಸಮೀಪವಿರುವ ನುಂಕಿಮಲೆ ಸಿದ್ದೇಶ್ವರ ಬೆಟ್ಟದಲ್ಲಿ ಸಹ ಹಬ್ಬ-ಹರಿದಿನಗಳನ್ನು ಆಚರಿಸಲಾಗುತ್ತದೆ. ಅಲ್ಲಿನ ಶಕ್ತಿ ದೇವತೆಯನ್ನು ಹಾಗೂ ಹರಳಯ್ಯ ಬೆಟ್ಟದ ಮೇಲೆ ಕುಳಿತು ಮಾಂಸವನ್ನು ಬೇಯಿಸಿ ತಿನ್ನುತ್ತಿದ್ದರೆಂಬ ವಿಷಯ ಪುರಾಣಗಳ ಮೂಲಕ ತಿಳಿಯುತ್ತದೆ.

ಮೊಳಕಾಲ್ಮೂರು ತಾಲ್ಲೂಕಿನ ಇತಿಹಾಸವು ಬಹಳ ಪ್ರಾಚೀನವಾದುದು. ಪೂರ್ವ ಶಿಲಾಯುಗದಿಂದಲೂ ಜನವಸತಿ ಇತ್ತೆಂಬುದಕ್ಕೆ ಈ ತಾಲ್ಲೂಕಿನ ಹಲವು ಭಾಗಗಳಲ್ಲಿ ದೊರೆತಿರುವ ಬೃಹತ್ ಶಿಲಾ ಸಮಾಧಿಗಳು ಇತರ ಪ್ರಾಚೀನ ಅವಶೇಷಗಳು ಹಾಗೂ ಬ್ರಹ್ಮಗಿರಿಯಲ್ಲಿ ನಡೆದಿರುವ ಉತ್ಖನನಗಳಿಂದ ಸ್ವಯಂವೇದ್ಯವಾಗಿದೆ. ಇಲ್ಲಿನ ಇತಿಹಾಸವನ್ನು ಕ್ರಿ.ಪೂ. ೩ ನೇ ಶತಮಾನವೆಂದು ಗುರುತಿಸಬಹುದು. ಈ ಪ್ರದೇಶವು ಮೌರ್ಯ ಸಾಮ್ರಾಜ್ಯಕ್ಕೆ ಸೇರಿತ್ತು ಎಂಬುದು. ಬ್ರಹ್ಮಗಿರಿ, ಸಿದ್ದಾಪುರ, ಜಟಂಗಿ ರಾಮೇಶ್ವರಗಳಲ್ಲಿ ದೊರೆತಿರುವ ಅಶೋಕನ ಶಾಸನಗಳಿಂದ ವ್ಯಕ್ತವಾಗುತ್ತದೆ. ಮೊಳಕಾಲ್ಮೂರು ಪ್ರದೇಶವನ್ನು ಶಾತವಾಹನರು, ಕದಂಬರು ಆಳ್ವಿಕೆ ಮಾಡಿದ್ದರೆಂಬುದಾಗಿ ದಾಖಲೆಗಳಿವೆ. ಬ್ರಹ್ಮಗಿರಿಯ ಸುತ್ತಮುತ್ತ ವಿಸ್ತಾರವಾದ ಭೂಶೋಧನೆ ನಡೆದು ಈ ತಾಲ್ಲೂಕಿನ ಪ್ರಾಚೀನ ಸಂಸ್ಕೃತಿಯ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಂತಾಗುತ್ತದೆ.

ಬ್ರಹ್ಮಗಿರಿಯಲ್ಲಿ ನಡೆದ ಉತ್ಖನನದಲ್ಲಿ ಕೆಲವು ಬಗೆಯ ಸಂಸ್ಕೃತಿಗಳು ಕಂಡು ಬಂದಿವೆ. ಅತ್ಯಂತ ನವಶಿಲಾಯುಗದ ಸಂಸ್ಕೃತಿಯು ಇಲ್ಲಿ ಕಂಡುಬರುತ್ತದೆ. ಇದರ ಮುಖ್ಯ ಕುರುಹು ಕರಿಯ ಕಲ್ಲಿನ ಕೊಡಲಿಯಂತಹ ಉಜ್ಜಿ ನಯ ಮಾಡಿದ ಆಯುಧಗಳು ಇಲ್ಲಿ ದೊರೆತಿವೆ. ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿಯನ್ನು ಪ್ರತಿಬಿಂಬಿಸುವಂತಹ ದಪ್ಪ ಗುಂಡುಗಳನ್ನು ದುಂಡಗೆ ಜೋಡಿಸಿ ಕಲ್ಲಿನ ಶವ ಪೆಟ್ಟಿಗೆಗಳು ಕಂಡುಬಂದಿವೆ. ಆಳವಾದ ಕುಳಿಯಲ್ಲೂ ಹಲವಾರು ಬಗೆಯ ಹೊಳಪಿನ ಮಡಿಕೆಗಳನ್ನು ಕಬ್ಬಿಣದ ಆಯುಧಗಳನ್ನಿಟ್ಟು ವಿಶಿಷ್ಟವಾಗಿ ನಡೆಸುತ್ತಿದ್ದ ಶವ ಸಂಸ್ಕಾರ ಈ ಸಂಸ್ಕೃತಿಯ ಹೆಗ್ಗುರುತು. ಬ್ರಹ್ಮಗಿರಿಯಲ್ಲಿ ಬೃಹತ್ ಸಮಾಧಿಗಳು ದೊರೆತಿವೆ. ನಂತರ ಈ ತಾಲ್ಲೂಕಿನಲ್ಲಿ ಸುಂದರವಾದ ಗುಡಿ-ಗೋಪುರ ಮತ್ತು ಸುಂದರವಾದ ಅರಮನೆಯ ಅವಶೇಷಗಳು

ದೊರೆತಿವೆ. ಮೊಳಕಾಲ್ಮೂರು ಬೆಟ್ಟದಲ್ಲಿ ಕದಂಬ ದೊರೆಗಳು ಕಟ್ಟಿಸಿದ ಕೋಟೆ ಇದ್ದು ಅದು ಲಂಕೆ ಕೋಟೆ ಎಂದು ನಾಮಕರಣ ಮಾಡಲಾಗಿದೆ ಎಂದು ಹೇಳಬಹುದು. ನಂತರ ಜಟಂಗಿ ರಾಮೇಶ್ವರ ಬೆಟ್ಟದ ಮೇಲೆ ಉತ್ತರದ ಬಂಡೆಗಳ ಕೆಳಗೆ ಇರುವ ತಣ್ಣೀರಿನ ದೋಣಿಯ ಬಳಿ ಶ್ರೀರಾಮನು ಜಟಾಯುವಿಗೆ ಅಗ್ನಿ ಸಂಸ್ಕಾರ ಮಾಡಿದನೆಂಬ ಐತಿಹ್ಯ ಇದೆ. ಆ ನಂತರ ಅದು ಕೆಲವು ದಿನಗಳಲ್ಲಿ ಅಲ್ಲಿ ಏಕಾಂತವಾಗಿ ತಂಗಿದ್ದನಂತೆ. ಅದಕ್ಕಾಗಿ ಈ ದೋಣಿ ಏಕಾಂತ ತೀರ್ಥವೆಂದು ಹೆಸರಾಗಿದೆ.

ಮೊಳಕಾಲ್ಮೂರು ಪರಿಸರದ ಮಾದಿಗ ಸಮುದಾಯದ ಜನರು ಸುತ್ತಲಿನ ಗುಡ್ಡ, ಬೆಟ್ಟಗಳಲ್ಲಿ ಸಿಗುವ ಸೌದೆಯನ್ನು ಸಂಗ್ರಹಿಸಿ ಮಾರಿ ಅದರಿಂದ ಬರುವ ಅಲ್ಪಸ್ವಲ್ಪ ಹಣದಿಂದ ಕುಟುಂಬ ನಿರ್ವಹಣೆ ಮಾಡುವುದು ಕಂಡುಬರುತ್ತದೆ. ಕಡುಬಡತನವು ಈ ಸಮುದಾಯವನ್ನು ಕಿತ್ತು ತಿನ್ನುತ್ತಿದೆ. ಇಲ್ಲವೆ ಕೃಷಿ ಕೂಲಿ ಕಾರ್ಮಿಕರಾಗಿ ದುಡಿಯಬೇಕೆಂದರೆ ಈ ಪ್ರದೇಶವು ಒಣ ಬೇಸಾಯದ ಪರಿಧಿಗೆ ಸೇರಿದ್ದು ಮಳೆಯಾಶ್ರಿತ ಕೃಷಿ ಇಲ್ಲಿರುವುದರಿಂದ ವರ್ಷಪೂರ್ತಿ ಕೂಲಿ ದೊರೆಯುವುದಿಲ್ಲ. ನೀರಾವರಿ ಕೃಷಿಯಲ್ಲಿರುವಂತೆ ಇಲ್ಲಿ ಕೂಲಿ ಕೆಲಸಗಳಾಗಲಿ, ಕೂಲಿಯಿಂದ ಬರುವ ಹಣವಾಗಲಿ ಹೆಚ್ಚಿರುವುದಿಲ್ಲ. ಅಲ್ಲದೆ ಮಾನ್ಸೂನ್ ಮಳೆಯ ಕಣ್ಣಾಮುಚ್ಚಾಲೆಯಾಟದಿಂದಾಗಿ ಬರಗಾಲ ಇಲ್ಲಿ ತಪ್ಪಿದ್ದಲ್ಲ. ಇಂತಹ ಸಂದರ್ಭಗಳಲ್ಲಿ ಸಾಮೂಹಿಕವಾಗಿ ಗುಳೆ ಹೋಗುವ ಪರಿಸ್ಥಿತಿಯಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಲ್ಲಿನ ಮಾದಿಗ ಸಮುದಾಯದ ಜನರು ಹೆಚ್ಚಾಗಿ ಜೀತಕ್ಕೆ ತಮ್ಮನ್ನು ಸಮರ್ಪಿಸಿಕೊಂಡಿರುತ್ತಾರೆ. ಉಳ್ಳವರ ಬಿಟ್ಟಿ ಚಾಕರಿಯೂ ಇವರಿಗೆ ತಪ್ಪಿದ್ದಲ್ಲ. ಜೊತೆ ಅಸ್ಪೃಶ್ಯತೆಯ ಕಬಂಧ ಬಾಹುಗಳಲ್ಲಿ ಇವರು ಸಿಕ್ಕಿಕೊಂಡಿದ್ದಾರೆ.

ಪ್ರಸ್ತುತ ಅಧ್ಯಯನದ ಭೌಗೋಳಿಕ ವ್ಯಾಪ್ತಿಯಲ್ಲಿ ಬರುವ ಮಾದಿಗ ಸಮುದಾಯದ ಜನಸಂಖ್ಯೆ ನಿಖರವಾಗಿ ತಿಳಿದು ಬರುವುದಿಲ್ಲ. ಆದ್ದರಿಂದ ಅವರನ್ನು ಮಾದಿಗರು, ಹೊಲೆಯರು ಎಂಬ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಷ್ಟೆ ನಮೂದಿಸಲಾಗುತ್ತದೆ. ೧೯೭೭ ರ ರಲ್ಲಿಯಷ್ಟೇ ಮಾದಿಗರನ್ನು ಪರಿಶಿಷ್ಟಜಾತಿ ಎಂದು ಸೇರಿಸಲಾಗಿದೆ. ಸಮಾಜದ ಅತ್ಯಂತ ಕೆಳಸ್ತರದಲ್ಲಿ ಇರುವ ದಲಿತ ಜನಪದ ವೃಂದಗಳಲ್ಲಿ ಮಾದಿಗರು ಒಬ್ಬರಾಗಿದ್ದರು. ಉತ್ತರ ಕರ್ನಾಟಕದಾದ್ಯಂತ ಸಾಮಾನ್ಯವಾಗಿ ಮಾದಿಗರು ಎಂಬ ಒಂದೇ ಹೆಸರಿನಿಂದ ಕರೆಯುತ್ತಿದ್ದರೂ ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯುವುದ ಕಂಡುಬರುತ್ತದೆ.

# ಅಧ್ಯಾಯ ಮೂರು

# ಮಾದಿಗರ ಸಾಮಾಜಿಕ ಸ್ಥಿತಿಗತಿ

ನಮ್ಮ ಸಂಸ್ಕೃತಿಯ ವ್ಯವಸ್ಥೆ ಸಮಾಜದಲ್ಲಿ ವಿಭಿನ್ನ ವೈಶಿಷ್ಟ್ಯತೆಯಿಂದ ಕೂಡಿರುವಂತದ್ದು. ನಂಬಿಕೆಗಳ ಆಗರದಲ್ಲಿ ಜೀವಿಸುತ್ತಿರುವ ಸಮುದಾಯಗಳ ಜನರು ತಮ್ಮದೇ ಆದ ಸಂಪ್ರದಾಯವನ್ನು ಹೊಂದಿದ್ದಾರೆ. ಇದಕ್ಕೆ ಮೂಲ ಪ್ರೇರಣೆ ಸಾಮಾಜಿಕ, ಆಚರಣೆಗಳು. ಇವು ಪ್ರಾಚೀನ ಕಾಲದಿಂದಲೂ ಅವರಿಗೆ ಬಳುವಳಿಯಾಗಿ ಬಂದಿರುವಂತದ್ದು. ಅದನ್ನು ಅವರು ಪೂಜ್ಯನೀಯ ಸಂಸ್ಕಾರದಲ್ಲಿ ಆಚರಿಸಿಕೊಂಡು ಸಮುದಾಯಗಳಲ್ಲಿ ಬಂದಿದ್ದಾರೆ. ಒಂದು ಸಮುದಾಯವನ್ನು ಗುರುತಿಸಬೇಕಾದರೆ ಅದರ ಸಮಸ್ತ ಸಂಸ್ಕೃತಿಯನ್ನು ಅವಲೋಕನ ಮಾಡಬೇಕಾಗುತ್ತದೆ. ಅಂತಹ ವಿಶಿಷ್ಟ ಸಂಸ್ಕೃತಿಗೆ ಸಂಪ್ರದಾಯಕ್ಕೆ ಸೇರಿದ ಸಮುದಾಯಗಳು ಸಾವಿರಾರು. ಅಂತಹ ಸಮುದಾಯದಲ್ಲಿ ಮಾದಿಗ ಸಮುದಾಯ ಒಂದು. ಈ ಎಲ್ಲಾ ಸಮುದಾಯಗಳನ್ನು ಹುಟ್ಟು ಹಾಕಿರುವುದು ಆಯಾ ಸಮುದಾಯದ ಮುಖ್ಯಸ್ಥರೇ ಇದರಲ್ಲಿ ಕಾಣದ ಕೈ ಯಾವುದೂ ಇಲ್ಲ. ಮನುಷ್ಯನು ತನ್ನ ಸುತ್ತ ತನ್ನ ಸಂಪ್ರದಾಯದ ಪರಿಧಿಯನ್ನು ಸುತ್ತಿಕೊಂಡು ಸಮುದಾಯವನ್ನಾಗಿ ಮಾಡಿಕೊಂಡು ಜೀವಿಸುತ್ತಾ ಬಂದಿದ್ದಾನೆ. ಇದಕ್ಕೆ ಮುಖ್ಯ ಕಾರಣ ಅವನಲ್ಲಿರುವ ಅಪಾರ ನಂಬಿಕೆ. ಇದನ್ನು ವಂಶಪಾರಂಪರ್ಯವಾಗಿ ತನ್ನ ಸಮುದಾಯದಲ್ಲಿ ಆಚರಿಸಿಕೊಂಡು ಬಂದಿರುವನು. ಅಂತಹ ಆಚರಣೆಯಲ್ಲಿ ಮಾದಿಗರ ಸಂಪ್ರದಾಯದ ನಂಬಿಕೆಗಳ ಜೀವನ ಸ್ಥಿತಿಗತಿ ವಿಶಿಷ್ಟವಾದುದು. ಅವರು ಶತಶತಮಾನಗಳಿಂದ ತಮ್ಮದೇ ಆದ ಸಮಾಜದಲ್ಲಿ ಸ್ಥಾನವನ್ನು ಪಡೆದುಕೊಂಡಿದ್ದಾರೆ. ಅವರ ಸಾಮಾಜಿಕ ಸ್ಥಿತಿಗತಿಯ ಬಗ್ಗೆ ವಿವೇಚಿಸುವಾಗ ಅವರ ಸಮುದಾಯದ ಸಂಸ್ಕೃತಿಯನ್ನು ಗುರುತಿಸಬಹುದಾಗಿದೆ.

**೩.೧ ಸಾಮಾಜಿಕ ಸ್ಥಿತಿಗತಿ**

ಮಾದಿಗ ಸಮುದಾಯದಲ್ಲಿ ಸಾಮಾಜಿಕ ಸ್ಥಿತಿಗತಿಯು ವಿಭಿನ್ನವಾಗಿ ಕೂಡಿರುವಂತದ್ದು. ಏಕೆಂದರೆ ಅವರು ಮುಗ್ಧರು. ಏನು ಅರಿಯದ ಅನಾಗರಿಕರು, ಅನಕ್ಷರಸ್ಥರೂ, ಸಂಪ್ರದಾಯದ ನಂಬಿಕೆಗಳನ್ನು ಹೃದಯ ಶ್ರೀಮಂತಿಕೆಯಿಂದ ಆಚರಿಸಿಕೊಂಡು ಬಂದಂತವರು. ಶತಶತಮಾಗಳಿಂದ ತುಳಿತಕ್ಕೆ ಒಳಪಟ್ಟವರು. ತಮ್ಮ ಕನಸುಗಳನ್ನು ಸುಟ್ಟುಕೊಂಡವರು. ಇತರರಿಗಾಗಿ ತನುಮನ ಧನ ಸಮರ್ಪಿಸಿಕೊಂಡವರು. ಸಮುದಾಯದಲ್ಲಿ ಉದಾರಿತನವನ್ನು ಮೆರೆದಂತವರು. ಅಂತಹ ಸಮುದಾಯದ ಸಾಮಾಜಿಕ ಸ್ಥಿತಿಗತಿ ಇತರೆ ಸಮುದಾಯದ ಸಾಮಾಜಿಕ ಸ್ಥಿತಿಗತಿಗಿಂತ ತುಂಬಾ ಭಿನ್ನವಾದುದು. ಸರಳತೆಯಿಂದ, ನಂಬಿಕೆಯಿಂದ, ದೃಢಭಕ್ತಿಯಿಂದ, ಆಚರಣೆಯಿಂದ, ಬದುಕುವ ಶೈಲಿಯಿಂದ ಈ ಎಲ್ಲದರಲ್ಲೂ ಶ್ರೀಮಂತಿಕೆಯನ್ನು ತೋರಿದವರೇ ಮಾದಿಗ ಸಮುದಾಯದವರು. ಕಾಯಕ ನಿಷ್ಠೆ ಅವರಲ್ಲಿ ಮನೆಮಾಡಿರುವಂತದ್ದು ದೇವರು ಕೊಟ್ಟ ವರವಾಗಿದೆ.

ಒಂದು ಜನಾಂಗದ ಜೀವನ ಶೈಲಿಯನ್ನು ಮತ್ತು ಆ ಜನಾಂಗದ ಮೂಲ ಸಂಸ್ಕೃತಿಯನ್ನು ಹಾಗೂ ಅವರ ಪರಂಪರೆಯಲ್ಲಿನ ಮೌಲ್ಯಗಳನ್ನು ಆಧರಿಸಿ ರೂಪುಗೊಂಡಿರುತ್ತದೆ ಎಂದು ಹೇಳಬಹುದು. ತದನಂತರ ಒಂದು ಸಂಸ್ಕೃತಿಯನ್ನು ಆಂತರಿಕ ಹಾಗೂ ಬಾಹ್ಯವಾಗಿ ಕೆಲವೊಂದು ಒತ್ತಡಗಳಿಂದಾಗಿ ಬದಲಾಗುವಂತಹ ಸಮಯ ಸಾಧಕಗಳನ್ನು ಆಯಾ ಬದಲಾವಣೆಗಳಿಗೆ ತಕ್ಕಂತೆ ಜೀವನ ವಿಧಾನವನ್ನು ಆಗಾಗ ರೂಪಿಸಿಕೊಳ್ಳಬೇಕಾಗುತ್ತದೆ. ಇಂಥ ಒಂದು ಪರಿಣಾಮಗಳಿಗೆ ತಕ್ಕಂತೆ ಮಾದಿಗರಲ್ಲಿ ಕೆಲವು ಸಾಮಾಜಿಕ ಸ್ಥಿತಿಗತಿಯನ್ನು ಕಾಣಬಹುದು. ಅದರಲ್ಲಿ ಮುಖ್ಯವಾಗಿ ಕೌಟುಂಬಿಕ ಜೀವನವನ್ನು ವಸತಿ ವ್ಯವಸ್ಥೆಯನ್ನು ಅವರ ಉಡುಗೆ ತೊಡುಗೆಗಳು, ಆಹಾರ ಪದ್ಧತಿ ಮತ್ತು ನ್ಯಾಯಪದ್ಧತಿಯನ್ನು, ನಂತರ ಅವರ ಕುಲಕಸುಬುಗಳನ್ನು ನಾವು ಕಾಣಬಹುದಾಗಿದೆ.

ಮಾದಿಗರ ಆಹಾರ ಪದ್ಧತಿಯಲ್ಲಿ ಉಡುಗೆ ತೊಡುಗೆಗಳಲ್ಲಿ ಬದಲಾವಣೆ ಕಂಡು ಬಂದರೂ ಮದುವೆ ಮತ್ತು ಸಾವುಗಳಿಗೆ ಸಂಬಂಧಿಸಿದ ಕೆಲವು ಆಚಾರ ವಿಚಾರಗಳನ್ನು ಕೆಲವೊಂದು ಅಂಶಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಆದ್ದರಿಂದ ಇವುಗಳ ವಿಶ್ಲೇಷಣೆ ಮತ್ತು ಅವರ ಸಂಸ್ಕೃತಿಯ ಮೂಲ ಸ್ವರೂಪದ ಮೇಲೆ ಬಹಳಷ್ಟು ಬೆಳಕನ್ನು ಚೆಲ್ಲಬಹುದಾಗಿದೆ. ವಾಸ್ತವವಾಗಿ ಮಾದಿಗ ಜನಾಂಗದಲ್ಲಿ ಅಂದರೆ ಹೊಲೆಮಾದಿಗರ ಬದುಕಿಗೂ ಮತ್ತು ಮಾದಿಗರ ಸಾಮಾಜಿಕ ಬದುಕಿಗೂ ಹೇಳಿಕೊಳ್ಳುವಂತಹ ವ್ಯತ್ಯಾಸಗಳೇನೂ ಕಂಡು ಬರುವುದಿಲ್ಲ. ಒಂದೊಂದು ಜನಾಂಗವು ಒಂದೊಂದು ವಿಶಿಷ್ಟವಾದಂತಹ ಸಾಂಸ್ಕೃತಿಕ ಅಂಶವನ್ನು ಮಾತ್ರ ಹೊಂದಿರುತ್ತದೆ ಎಂದು ಹೇಳಬಹುದು. ಆದ್ದರಿಂದ ಇಲ್ಲಿ ಮಾದಿಗರ ಭೌತಿಕ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಕೆಲವು ಸಂಗತಿಗಳನ್ನು ಹೇಳಲಾಗಿದೆ.

ಮಾದಿಗರ ಸಾಮಾಜಿಕ ಸ್ಥಾನಮಾನಗಳಲ್ಲಿ ಮಾದಿಗರನ್ನು ಅತ್ಯಂತ ಕೆಳಸ್ಥರದಲ್ಲಿ ಇಡಲಾಗಿದೆ. ಹೊಲೆಯರಂತೆ ಇವರನ್ನು ಮೇಲ್ವರ್ಗದವರು ಮುಟ್ಟಿಸಿಕೊಳ್ಳುವುದಿಲ್ಲ. ಇಲ್ಲಿ ಒಂದು ವಿಚಿತ್ರವೆಂದರೆ ಬ್ರಾಹ್ಮಣರನ್ನು ಇವರು ತಮ್ಮ ಕೇರಿಯಲ್ಲಿ ಬರುಗೊಡುವುದಿಲ್ಲ. ಒಂದು ವೇಳೆ ಏನಾದರೂ ಬಂದರೆ ಅವರನ್ನು 'ಥೀ ಹಳಿ ಹುಚ್ಚು ನಾಯಿ', ಎಂದು ಬೈದು ಕಳಿಸುತ್ತಿದ್ದರು. ನಂತರ ಅವನು ಬಂದು ಹೋದ ದಾರಿಯಲ್ಲಿ ಅಥವಾ ಜಾಗದಲ್ಲಿ ನೀರು ಹಾಕಿ ಸಗಣಿಯಿಂದ ಸಾರಿಸುತ್ತಾರೆ. ಇವರು ಅಗಸ ಹಾಗೂ ಗೊಲ್ಲರ ಮನೆಯಲ್ಲಿ ಎಂದಿಗೂ ಊಟಮಾಡುವುದಿಲ್ಲ ಎಂದು ಹೇಳುತ್ತಾರೆ. ಹೊಲೆಯರಲ್ಲಿ ಮುಖ್ಯಸ್ಥರು ಇರುವಂತೆ ಮಾದಿಗರಲ್ಲಿಯೂ ಸಹ ಕಟ್ಟೆಮನಿಯವರು ಮುಖಂಡರಾಗಿರುತ್ತಾರೆ. ಕನ್ನಡ ಮಾದಿಗರಲ್ಲಿ ದೊಡ್ಡ ಮಾದಿಗರು ಎಂದು ಕರೆಯುತ್ತಾರೆ. ನಂತರ ಆ ಕೇರಿಯಲ್ಲಿ ಒಬ್ಬ ಯಜಮಾನನ್ನು ಸಹ ನೇಮಿಸಿರುತ್ತಾರೆ. ಆ ಯಜಮಾನನು ಹೇಳಿದ ಹಾಗೆಯೇ ಕೇರಿಯ ಜನರೆಲ್ಲರೂ ಕೇಳಬೇಕಾಗುತ್ತದೆ. ಸಮಾಜದಲ್ಲಿ ಅವರಿಗೊಂದು ಸ್ಥಾನಮಾನವಿದೆ. ಆದ್ದರಿಂದ ಸಮುದಾಯದಲ್ಲಿ ಸ್ವತಂತ್ರವಾಗಿ ತನ್ನ ಜೀವನ ಶೈಲಿಯಲ್ಲಿ ಅನೇಕ ಏಳುಬೀಳುಗಳನ್ನು ಕಂಡಿದ್ದಾನೆ. ಕುಟುಂಬದ ವ್ಯವಸ್ಥೆಯಲ್ಲಿ ಬದುಕುವ ಜೀವನ ಪರಿಯಲ್ಲಿ ಎಲ್ಲದರಲ್ಲೂ ತನ್ನ ಸೂಕ್ಷ್ಮ ಬುದ್ಧಿವಂತಿಕೆಯನ್ನು ಸಮುದಾಯದ ಪರವಾಗಿ ತೋರಿದ್ದಾನೆ.

### ೩.೨ ಕೌಟುಂಬಿಕ ಜೀವನ

ಯಾವುದೇ ಒಂದು ಸಮುದಾಯದಲ್ಲಿ ಸಂಸ್ಕೃತಿಯನ್ನು, ಜೀವನವನ್ನು, ಪ್ರತಿಬಿಂಬಿಸುವುದು ಕುಟುಂಬ. ಕುಟುಂಬ ಸಮುದಾಯದ ಹಿರಿಯ ಮಗ ಇದ್ದಂತೆ. ಕುಟುಂಬದಿಂದಲೇ ಆ ಸಮುದಾಯಕ್ಕೆ ಜೀವಾಳ. ಏಕೆಂದರೆ ಕುಟುಂಬದೊಂದಿಗೆ ಸಂಸ್ಕೃತಿಯ ಸಾವಿರಾರು ರೂಪಗಳು ಇವೆ. ಆ ಎಲ್ಲಾ ರೂಪಗಳಿಂದ ಆ ಸಮುದಾಯವನ್ನು ಗುರುತಿಸಬಹುದಾಗಿದೆ.

ಸಮುದಾಯದಲ್ಲಿ ಕೌಟುಂಬಿಕ ಜೀವನ ಸಂಸ್ಕೃತಿಯ ಜೀವಾಳವಾಗಿದೆ. ಕುಟುಂಬದಲ್ಲಿ ಎಲ್ಲಾ ಸದಸ್ಯರ ಪಾತ್ರ ಅಮೂಲ್ಯವಾದದ್ದು. ಮನೆಯ ಯಜಮಾನ ತಂದೆಯಾದರೂ ತಂದೆಗೆ ಯಜಮಾನಿ ತಾಯಿ ಆಗುತ್ತಾಳೆ. ಅಂದರೆ ಇಲ್ಲಿ ಕುಟುಂಬದಲ್ಲಿ ಮುಖ್ಯ ಜವಾಬ್ದಾರಿ ಯಜಮಾನ. ಸಮಾಜದಲ್ಲಿ ಪುರುಷ ಇದ್ದರೆ, ಕುಟುಂಬದಲ್ಲಿ ಸ್ತ್ರೀಯ ಪಾತ್ರ ಅವಿಸ್ಮರಣೀಯ.

ಜೀವನ ನಿರ್ವಹಣೆಗೆ ಕಾಯಕ ವೃತ್ತಿಯನ್ನು ಅವಲಂಬಿಸಿದ ಇವರು ಚಮ್ಮಾರಿಕೆ ಕಾಯಕ ಕುಲಕಸುಬಾಗಿದೆ. ಆದ್ದರಿಂದ ನಾನಾ ವಸ್ತುಗಳನ್ನು ಸೃಷ್ಟಿಸಿ ಅವುಗಳನ್ನು ಮಾರಿ ಜೀವನ ನಿರ್ವಹಣೆ ಮಾಡುವುದನ್ನು ಗಮನಿಸಬಹುದಾಗಿದೆ.

ಅದರಂತೆಯೇ ಉದ್ಯೋಗದ ನಾನಾ ಮುಖಗಳನ್ನು ಆ ಸಮುದಾಯದಲ್ಲಿ ಕಾಣಬಹುದು. ಇವರ ಕುಟುಂಬದಲ್ಲಿ ಅವಿಭಕ್ತ ಕುಟುಂಬ ನೋಡಬಹುದು. ಹಿರಿಯರೆಲ್ಲರೂ ಕಾಯಕದಲ್ಲಿ ತೊಡಗಿದರೆ, ಕಿರಿಯರು ಮನೆಯ ಸಣ್ಣಪುಟ್ಟ ಕಾರ್ಯಗಳಲ್ಲಿ ಮಗ್ನರಾಗುವರು.

ಇವರಿಗೆ ಬಲವಾದ ದೈವನಂಬಿಕೆ, ಸಂಪ್ರದಾಯವನ್ನು ಜೀವಕ್ಕಿಂತ ಹೆಚ್ಚಾಗಿ ಆಚರಿಸಿದ್ದಾರೆ. ಅಲ್ಲದೆ ಕುಟುಂಬದಲ್ಲಿ ಆಚರಣೆ, ವೇಷಭೂಷಣ, ಆಹಾರ ಪದ್ಧತಿ, ನೆಲೆಯ ವ್ಯವಸ್ಥೆ, ಆಡಳಿತ ನ್ಯಾಯಪದ್ಧತಿ, ವಿದ್ಯಾಭ್ಯಾಸ, ಹೈನುಗಾರಿಕೆ, ಕೃಷಿ, ಇತರೆ ಆರ್ಥಿಕ ಮತ್ತು ಧಾರ್ಮಿಕ, ಶೈಕ್ಷಣಿಕ, ರಾಜಕೀಯ ಅಂಶಗಳನ್ನು ಸಾಮಾಜಿಕ ಸ್ಥಿತಿಗತಿಯಲ್ಲಿ ಸಮುದಾಯದ ಕುಟುಂಬಗಳಲ್ಲಿ ನೋಡಬಹುದಾಗಿದೆ.

### ೩.೩ ಆಹಾರ ಪದ್ಧತಿ

ಮಾದಿಗರು ಸೇವಿಸುವಂತಹ ಆಹಾರವು ಇತರ ಜನಾಂಗದಂತೆಯೇ ಇರುತ್ತದೆ. ಇಲ್ಲಿ ಹೊಲೆಯರು ಯಾವ ಆಹಾರವನ್ನು ಸೇವಿಸುತ್ತಾರೆಯೋ ಅವರು ಸಹ ಅದೇ ಆಹಾರವನ್ನು ಸೇವಿಸುತ್ತಾರೆ. ಇವರು ಮಾಂಸಹಾರಿಗಳು ಹೌದು, ಸಸ್ಯಹಾರಿಗಳೂ ಹೌದು. ಮಾಂಸ ಆಹಾರದಲ್ಲೂ ಮುಖ್ಯವಾಗಿ ಕೋಣದ ಮಾಂಸಕ್ಕೆ ಹೆಚ್ಚು ಮಹತ್ವವನ್ನು ಕೊಡುತ್ತಾರೆ. ಹಿಂದಿನ ಕಾಲದಲ್ಲಿ ತಾತ ಅಜ್ಜಿಯರು ಕೆಲವೊಂದು ಪುರಾಣ ಕಥೆಗಳನ್ನು ಜಾನಪದ ಗೀತೆಗಳನ್ನು ಹಾಡುಗಳನ್ನು ಮತ್ತು ಕೆಲವೊಂದು ಆಚರಣೆಗಳಿಗೆ ಸಂಬಂಧಿಸಿದಂತೆ ಹಾಡುಗಳನ್ನು ಹಾಡುತ್ತಾರೆ. ನಂತರ ಗ್ರಾಮದೇವತೆಗಳ ಆರಾಧನೆಯಲ್ಲಿ ಕೋಣಗಳನ್ನು ಬಲಿಕೊಡುತ್ತಿದ್ದರು. ಅಂದರೆ ಮಾದಿಗರಿಗೆ ಕೆಲವೊಂದು ಜಾತ್ರೆಗಳಲ್ಲಿ ಹಬ್ಬ ಹರಿದಿನಗಳಲ್ಲಿ ಹೆಚ್ಚಾಗಿ ಮಾಂಸವನ್ನೆ ಉಪಯೋಗಿಸುತ್ತಿದ್ದರು. ಉದಾಹರಣೆಗೆ ಯುಗಾದಿ ಅಥವಾ ದಸರಾ ಹಬ್ಬ ಏನಾದರೂ ಬಂದರೆ ಆ ಹಬ್ಬಕ್ಕೆ ತಕ್ಕಂತೆ ಅಡಿಗೆಯನ್ನು ಮಾಡುತ್ತಾರೆ. ಅಂದರೆ ಯುಗಾದಿಗೆ ಸಂಬಂಧಿಸಿದ ಹಾಗೆ ಹೋಳಿಗೆ, ಕರಿಗಡುಬುಗಳನ್ನು ಮಾಡುತ್ತಾರೆ. ಆದರೆ ಹೆಚ್ಚಾಗಿ ಈ ಊಟವನ್ನು ಮಾಡುವುದಿಲ್ಲ. ಕಾರಣ ಅವರು ಮಾಂಸದ ಮೇಲೆಯೇ ಹೆಚ್ಚಾಗಿ ಅವಲಂಬಿತರಾಗಿರುವುದರಿಂದ ಮಾದಿಗರು ವಾರಕ್ಕೆ ೩ ಅಥವಾ ೪ ಬಾರಿ ಮಾಂಸ ತಿನ್ನುತ್ತಾರೆ.

ಮಾದಿಗರು ಪ್ರಾಣಿಗಳ ಬಲಿ ನಿರ್ವಾಹಕರಾಗಿದ್ದರಿಂದ ಅವರಿಗೆ ಬಲಿಯನ್ನು ತೆಗೆದುಕೊಂಡಿರುವ ಪ್ರಧಾನ ಪಾಲು ಈ ಮಾದಿಗರಿಗೆ ಸಂದಾಯವಾಗುತ್ತಿತ್ತು. ನಂತರ ಹಿಂದೆ ಸತ್ತದನಗಳ ವಾರಸುದಾರರು ಇವರೇ ಆಗಿದ್ದರಿಂದ ತಿನ್ನಲು ಯೋಗ್ಯವಾದ ಸತ್ತದನದ ಮಾಂಸವೂ ಸಹ ಇವರ ಮುಖ್ಯ ಆಹಾರವಾಗಿತ್ತು. ಆಗಿನ ಕಾಲದಲ್ಲಿ ಹಿರಿಯರು ಸಾಹುಕಾರ ಅಥವಾ ಗೊಂಚಿಗ್ಯಾರನ ಮನೆಯಲ್ಲಿ ಸಂಬಳ ದುಡಿಯಬೇಕಾಗಿತ್ತು. ಏಕೆಂದರೆ ತಿನ್ನುವುದಕ್ಕೆ ಬಹಳ ಕಷ್ಟವಾಗಿತ್ತು. ಆದ್ದರಿಂದ ಮಾದಿಗರು ಕೆಲವೊಂದು ಮನೆಗಳಲ್ಲಿ ಸಂಬಳ ದುಡಿಯಬೇಕಾಯಿತು. ಆಗಿನ ಕಾಲದಲ್ಲಿ ಅವನಿಗೆ ಕೊಡಬೇಕಾದ ಸಂಬಳ ವರ್ಷಕ್ಕೆ ಎರಡಾಣೆ, ಅಥವಾ ಮೂರಾಣೆಯನ್ನು ಕೊಡುತ್ತಿದ್ದರು. ಇದರಿಂದ ಮಕ್ಕಳು ಮರಿಗಳೆಲ್ಲರೂ ಜೀವನ ಸಾಗಿಸುತ್ತಿದ್ದರು. ನಂತರ ಆ ಹೊತ್ತಿಗೆ ಸಾಕಾಗುವಷ್ಟು ಮಾಂಸವನ್ನು ಇಟ್ಟುಕೊಂಡು ಉಳಿದ ಮಾಂಸವನ್ನು ಕುಡುಗೋಲಿನಿಂದ ಉದ್ದುದ್ದ ಕೊಯ್ದು ಹಗ್ಗವನ್ನು ಕಟ್ಟಿ ಆ ಹಗ್ಗಕ್ಕೆ ತೋರಣದಂತೆ ಹಾಕಬೇಕಾಗುತ್ತದೆ. ನಂತರ ಏನಾದರೂ ಹೆಚ್ಚಾದರೆ ಆ ಮಾಂಸವನ್ನು ಸಣ್ಣಗೆ ತುಂಡು-ತುಂಡಾಗಿ ಮಾಡಿ ಒಂದು ಪುಟ್ಟಿಯಲ್ಲಿ ಹಾಕಿ ಆ ಪುಟ್ಟಿಯ ಮೇಲೆ ಒಂದು ಬೇಲಿಯನ್ನು ಇಟ್ಟು ಪ್ರಾಣಿಗಳು ಮುಟ್ಟದಂತೆ ನೋಡಿಕೊಳ್ಳಬೇಕಾಗುತ್ತದೆ. ಅದರ ಹಿಂದಿನ ಕುಲಕಸುಬು ಈಗ ಕೈಬಿಟ್ಟಿರುವುದರಿಂದ ಆಗ ಸಿಗುತ್ತಿದ್ದ ಬಹುಪಾಲು ದನಗಳು ಈಗ ಅಪರೂಪವಾಗಿವೆ ಎಂದು ಹೇಳಬಹುದು.

### ೩.೪. ವಸತಿ ವ್ಯವಸ್ಥೆ.

ಮಾದಿಗರು ನೆಲೆಸಿರುವ ಕೇರಿಗೆ ಅಥವಾ ಓಣಿಗೆ ಮಾದರಗೇರಿ, ಮಾದರೋಣಿ ಎಂದು ಕರೆಯುತ್ತಾರೆ. ಅಂದರೆ ಮಾದಿಗರು ಮೂಲತಃ ಊರಿಂದೂರಿಗೆ ಅಲೆಯುವ ಅಲೆಮಾರಿಗಳಾಗಿದ್ದು ಕಾಲ ಕ್ರಮೇಣ ಅಲ್ಲಲ್ಲಿ ನೆಲೆ ನಿಂತವರಾಗಿದ್ದಾರೆ. ಇವರು ನೆಲೆ ನಿಂತ ಮೇಲೆ ಮಳೆಗಾಲವೊಂದನ್ನು ಬಿಟ್ಟು ಉಳಿದೆಲ್ಲಾ ಋತುಗಳಲ್ಲೂ ಇವರ ರಂಗಜಾಥಗಳು ಸಂಚಾರದಲ್ಲಿರುತ್ತಿದ್ದವು. ಅಂದರೆ ಒಂದು ಊರಿನಲ್ಲಿ ಏನಾದರೂ ಮಳೆಬಾರದೇ ಹೋದರೆ ಅಲ್ಲಿ ಇರುವಂತಹ ಜನರು ವಲಸೆ ಹೋಗಲು ಪ್ರಾರಂಭಿಸುತ್ತಾರೆ. ಏಕೆಂದರೆ ತಮ್ಮ ತಮ್ಮ ಹೊಟ್ಟೆಪಾಡಿಗೋಸ್ಕರ ಒಂದು ಊರಿನಿಂದ ಮತ್ತೊಂದು ಊರಿಗೆ ಹೋಗಿ ಜೀವನವನ್ನು ಸಾಗಿಸುತ್ತಾರೆ. ನಂತರ ಆ ಊರಿನಲ್ಲಿ

ದುಡಿದುಕೊಂಡು ಬಂದು ತಮ್ಮ ಮೂಲ ನೆಲೆಗಳಿಗೆ ಹಿಂತಿರುಗುತ್ತಾರೆ. ಇಂಥಹ ನೂರಾರು ವರ್ಷಗಳು ಸೇರಿ ಅರೆಅಲೆಮಾರಿಗಳಾಗಿ ಬದುಕಿ ಬಂದು ಮಕ್ಕಳು ಮರಿಯನ್ನು ಸಾಕಿಕೊಂಡು ಅಲೆಮಾರಿ ಬದುಕಿಗೆ ವಿದಾಯ ಹೇಳಿ ಇದೀಗ ಶಾಶ್ವತವಾಗಿ ನೆಲೆನಿಂತಿದ್ದಾರೆ.

ನಂತರ ಹಿಂದೆಲ್ಲ ಅಲೆಮಾರಿ ಬದುಕಿಗೆ ಅಂಟಿಕೊಂಡಿದ್ದ ಜನರು ತಮಗೆ ಮನೆಮಾಡಿಕೊಳ್ಳಬೇಕೆಂಬ ಹಂಬಲ ಅಥವಾ ವ್ಯಾಮೋಹ ಅವರಲ್ಲಿರಲಿಲ್ಲ. ಹೋದ ಊರಲ್ಲಿ ಮಾದಿಗ ಕೇರಿಯಲ್ಲೇ ಇರುವ ಯಾವುದಾದರೂ ಮನೆಯೋ ಅಥವಾ ಮಾರಿಗುಡಿಯೋ ಇನ್ನ್ಯಾವುದೋ ಟೆಂಟುಗಳನ್ನು ಹಾಕಿಕೊಂಡು ವಾಸ್ತವ್ಯಕ್ಕೆ ಅಣಿಯಾಗುತ್ತಿದ್ದರು. ಅವರು ಇರುವಷ್ಟು ಕಾಲ ಇದ್ದು ದುಡಿದುಕೊಂಡು ತಮ್ಮ ಊರಿಗೆ ಹೋಗುತ್ತಿದ್ದರು. ಆದರೆ ಮಾದಿಗರ ಕೇರಿಯಲ್ಲೇ ಉಳಿಯಲು ಅವಕಾಶವಿತ್ತು. ಆದರೆ ದೊಕ್ಕಲರಂತೆ ಇವರನ್ನು ಊರ ಹೊರಗಡೆ ಇಡುತ್ತಿರಲಿಲ್ಲ. ಮಾದಿಗರವು ಪ್ರತ್ಯೇಕವಾದಂತಹ ಕೇರಿಗಳೇನಲ್ಲ. ಎಲ್ಲಾ ಜನಾಂಗದವರ ಮನೆಗಳೂ ಸಹ ಕೂಡಿಕೊಂಡು ಇದ್ದವು. ಆದರೆ ಜಗತ್ತಿನಲ್ಲಿ ಮಾದಿಗರ ಕೇರಿಯೇ ಬೇರೆ, ಲಿಂಗಾಯಿತರ ಮನೆಗಳೇ ಬೇರೆ. ಹೀಗೆ ಬೇರೆ ಬೇರೆ ಜನಾಂಗಗಳೆಂದು ವಿಂಗಡಣೆ ಮಾಡಿದರು. ಮಾದಿಗರ ಕೇರಿ ಮಾದಿಗರ ಕೇರಿಗಳೇ ಆಗಿರುತ್ತವೆ. ಅಂದರೆ ಉಳಿದ ಭಾಗಗಳಲ್ಲಿ ಇವರ ಸಂಖ್ಯೆ ಕಡಿಮೆ ಇರುವುದರಿಂದ ಮಾದಿಗರ ಕೇರಿಗಳಲ್ಲೇ ಇವರ ವಾಸಸ್ಥಳ. ಅಂದರೆ ಕೆಲವೊಂದು ಪಟ್ಟಣಗಳಲ್ಲಿ ಇರುತ್ತವೆ. ಆದರೆ ಇವತ್ತಿನ ದಿನದಲ್ಲಿ ನಗರಗಳಲ್ಲಿ ಮಾದಿಗರ ಕೇರಿಗಳನ್ನು ಕಂಡು ಹಿಡಿಯುವುದಕ್ಕೆ ಆಗುವುದಿಲ್ಲ. ಆದ್ದರಿಂದ ಇವರದೇ ಆದಂತಹ ಕೇರಿಗಳು ಇರುತ್ತವೆ.

ನಂತರ ಇವರ ಕೇರಿಗಳು ಊರಿಗಿಂತ ಸ್ವಲ್ಪ ದೂರವಾಗಿರುತ್ತವೆ. ಏಕೆಂದರೆ ಮೇಲ್ವರ್ಗದ ಜನರು ತಮ್ಮ ಪಕ್ಕದಲ್ಲಿದ್ದರೆ ಮುಟ್ಟಿಸಿಕೊಳ್ಳುತ್ತಾರೆ. ಅಥವಾ ಮೈಲಿಗೆ ಆಗುತ್ತದೆ ಎಂದು ಇವರನ್ನು ದೂರ ಇಡುತ್ತಿದ್ದರು. ಹಾಗೂ ಇವರದೇ ಆದಂತಹ ಕೇರಿಯನ್ನಾಗಿ ನೇಮಿಸಿಕೊಂಡರು. ಆ ಊರಿನ ಜನ ಆ ಕೇರಿಗೆ ಬಂದು ಹೋಗುವುದು ಕಡಿಮೆ. ಆದರೆ ಮಾದಿಗರು ಮಾತ್ರ ತಮಗೆ ಬೇಕಾದಂತಹ ವಸ್ತುಗಳಾಗಿರಬಹುದು, ಸಾಮಾಗ್ರಿಗಳಾಗಿರಬಹುದು ಇವುಗಳನ್ನು ತೆಗೆದುಕೊಂಡು ಬರುವುದಕ್ಕೆ ಊರಿನ ಒಳಗೆ ಹೋಗಿ ತಮ್ಮ ತಮ್ಮ ಸಾಮಾಗ್ರಿಗಳನ್ನು ತೆಗೆದುಕೊಂಡು ಹಿಂತಿರುಗುತ್ತಿದ್ದರು. ಆದರೆ ನಿರ್ಮಾಣವಾಗುವಂತಹ ಸ್ಥಳಗಳು ಮಾತ್ರ ಕೆಲವು ಹಳ್ಳಿಗಳಲ್ಲಿ ಬೇರೆ ಬೇರೆ ಇರುವುದು ಕಂಡು ಬಂದರೆ ಇನ್ನು ಕೆಲವು ಭಾಗಗಳಲ್ಲಿ ಹೊಲಗೇರಿ ಸಾಮಾನ್ಯವಾಗಿ ಊರಿನ ಪೂರ್ವಕ್ಕೆ ಮಾದಿಗರ ಕೇರಿಯೂ ಇಲ್ಲವೆ ಪಶ್ಚಿಮಕ್ಕೆ ಇರುವುದು ಕಂಡು ಬರುತ್ತದೆ. ನಾಗವರ್ಮನು ಮಾದಿಗರ ವಾಸಸ್ಥಳಕ್ಕೆ ಹೆಸರಿಡುತ್ತಾನೆ. ಅದೆಂದರೆ 'ಮಾತಂಗರ ಪಳ್ಳಿ, ಪೊಲೆವಟ್ಟು ಹಾಗೂ ಪೊಲೆಯರ ಪಟ್ಟಣ' ಎಂದು ಕರೆದಿದ್ದಾನೆ.[೧]

ಹಿಂದಿನ ಕಾಲದಲ್ಲಿ ಮಾದಿಗರ ಕೇರಿಯಂತೆಯೇ ಅವರಿಗೆ ಸ್ಮಶಾನ ಭೂಮಿ ಕೂಡ ಪ್ರತ್ಯೇಕವಾಗಿಯೇ ಇರುತ್ತದೆ. ನಂತರ ಸೇದುವ ಬಾವಿಯೂ ಸಹ ಪ್ರತ್ಯೇಕವಾಗಿತ್ತು. ಏಕೆಂದರೆ ನೀರನ್ನು ತರುವಂತಹ ಸಂದರ್ಭದಲ್ಲಿ ಮೇಲ್ಜಾತಿಯವರು ಕೊಡಗಳನ್ನು ಮುಟ್ಟಿಸಿಕೊಳ್ಳುತ್ತಾರೆ ಎಂಬ ಕಾರಣದಿಂದ ಅವರಿಗೆ ಪ್ರತ್ಯೇಕವಾಗಿ ಸೇದುವ ಬಾವಿ ಇರುತ್ತದೆ. ಉದಾಹರಣೆಗೆ ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಸಂಗತಿಯೊಂದು ಹೀಗಿದೆ. ತಿಮ್ಮಲಾಪುರ ಎನ್ನುವ ಗ್ರಾಮದಲ್ಲಿ ಇವತ್ತಿಗೂ ಸಹ ಜಾತಿ-ಬೇಧ, ಮೇಲು-ಕೀಳು ಎಂಬ ಭಾವನೆಯನ್ನು ಇಟ್ಟುಕೊಂಡಿದ್ದಾರೆ. ಕೆಳಜಾತಿಯವರು ಟೀ ಕುಡಿಯಲಿಕ್ಕೆ ಹೋದಾಗ ಅವರದೇ ಆದಂತಹ ಸಿಲವರ್ ಲೋಟಗಳನ್ನು ಇಡುತ್ತಿದ್ದರು. ಅವರು ಹೊರಗಡೆಯೇ ಕುಳಿತು ಟೀ ಕುಡಿಯಬೇಕಾಗುತ್ತಿತ್ತು. ಆಗಿರುವಂತಹ ಜಾತಿಪದ್ಧತಿ ಇಂದಿಗೂ ಬೆಳಸಿಕೊಂಡು ಬಂದಿದ್ದಾರೆ. ಆಗಿನ ಕಾಲದಲ್ಲಿ ಮಾದಿಗರು ತಮ್ಮ ಮನೆಗಳಿಗೆ ಕೇವಲ ಕೆಮ್ಮಣ್ಣು ಮಾತ್ರ ಬಳಿಯುತ್ತಿದ್ದರು. ಏಕೆಂದರೆ ಮಾದಿಗರ ಕೇರಿಯು ಊರಿನಿಂದ ಹೊರಗೆ ಎದ್ದು ಕಾಣುವಂತೆ ಇದ್ದರೂ ಸಹ ಸುಣ್ಣವನ್ನು ಬಳಿಯುತ್ತಿರಲಿಲ್ಲ. ಆದ್ದರಿಂದ ಮಾದಿಗರ ಕೇರಿಯಂತೆ ಹೊಲೆಯರ ಕೇರಿಯೂ ಸಹ ಊರಿನಿಂದ ಪ್ರತ್ಯೇಕವಾಗಿ ಇಡಲಾಯಿತು. ಹೀಗಾಗಿ ಊರಿಗೆ ಬರುವಂತಹ ಹೊಸಬರಿಗೆ ನೆಂಟರಿಷ್ಟರಿಗೆ ಸಾಧು ಸಂತರಿಗೆ ಇನ್ನಿತರ ಅಲೆಮಾರಿ ಜಾತಿಗಳಿಗೆ ಮಾದಿಗರು ಉಳಿದೆಲ್ಲರಿಗಿಂತ ಕೀಳಾಗಿ ಕಾಣುವುದರಿಂದ ಈ ಪ್ರತ್ಯೇಕ ಕೇರಿಗಳನ್ನು ಮಾಡಲಾಯಿತು. ಏಕೆಂದರೆ ಮಾದಿಗರು ದನದ ಮಾಂಸವನ್ನು ತಿನ್ನುವುದರಿಂದ ಈ ಜಾತಿಯನ್ನು ಪ್ರತ್ಯೇಕವಾಗಿ ತಮ್ಮದೇ ಆದಂತಹ ಕೇರಿಯನ್ನಾಗಿ ಮಾಡಿಕೊಂಡು ಜೀವನವನ್ನು ಸಾಗಿಸುತ್ತಾರೆ. ಈ ಸಮುದಾಯದವರಿಗೆ

ಕೇವಲ ಬಟ್ಟೆ, ಆಹಾರ, ನೀರು, ಮತ್ತು ಮನೆಗಳು ಇರುತ್ತವೆ. ಆದರೂ ಕೂಡ ಸ್ವಚ್ಛತೆಯಿಂದ ಇರವುದಿಲ್ಲ. ಏಕೆಂದರೆ ಬೆಳಿಗ್ಗೆ ಎಂಟೂವರೆ ಹೊತ್ತಿಗೆ ತಮ್ಮ ತಮ್ಮ ಹೊಲಗಳಿಗೆ ಹೋಗಿ ಕೆಲಸವನ್ನು ಮಾಡುತ್ತಾರೆ. ಬರುವುದಕ್ಕೆ ಸಾಯಂಕಾಲ ಆಗುತ್ತದೆ. ಇದರಿಂದ ಅವರು ಕೀಳಾಗಿ ಕಾಣುತ್ತಾರೆ. ಇದರಿಂದ ಮೇಲ್ವರ್ಗದವರು ಇವರನ್ನು ಮುಟ್ಟಿಸಿಕೊಳ್ಳುವುದಿಲ್ಲ. ತದನಂತರ ಮಾದಿಗರು ಬಾವಿ ಎಂದು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗುವಂತೆ ಆ ಬಾವಿಯ ದಡದಲ್ಲಿ ಕಲ್ಲನ್ನು ಅಥವಾ ಮೊಳೆಯನ್ನು ಊಳುತ್ತಾರೆ. ಇವತ್ತಿಗೂ ಕೆಲವೊಂದು ಊರುಗಳಲ್ಲಿ ಈ ಸಂಪ್ರದಾಯ ಇದೆ ಎಂದು ಹೇಳಬಹುದು.

ನಂತರ ಮಾದಿಗರಲ್ಲಿ ವಾರದ ಶನಿವಾರ ಮತ್ತು ಸೋಮವಾರಗಳು ಶ್ರೇಷ್ಠವೆಂಬ ನಂಬಿಕೆ ಅವರಲ್ಲಿತ್ತು. ಏಕೆಂದರೆ ಶನಿವಾರವನ್ನು ತೆಗೆದುಕೊಂಡಾಗ ಆಂಜನೇಯನ ಭಕ್ತಿಯನ್ನು ಮಾಡುತ್ತಾರೆ. ಸೋಮವಾರ ಎಂದಾಕ್ಷಣ ನಂದೀಶನ ದಿನ ಎಂದು ನಂಬುತ್ತಾರೆ. ಕೆಲವೊಂದು ಊರುಗಳಲ್ಲಿ ಸೋಮವಾರದಂದು ಎತ್ತುಗಳಿಗೆ ವಿಶ್ರಾಂತಿ ನೀಡಲಾಗುತ್ತದೆ. ಅಂದು ಹೊಲದ ಬೇಸಾಯಕ್ಕೆ ಅಥವಾ ಉಳುಮೆಗೆ ಎತ್ತುಗಳ ದುಡಿಮೆ ಇರುವುದಿಲ್ಲ. ಇದು ಅವರ ನಂಬಿಕೆಯಾಗಿದೆ. ಇದರಿಂದ ಸೋಮವಾರದಂದು ಮನೆಯನ್ನು ಗುಡಿಸಿ ಸಾರಿಸಿ ಸ್ವಚ್ಛಮಾಡುತ್ತಾರೆ. ನಂತರ ಶನಿವಾರ ಬೆಳಗಿನ ಜಾವದಲ್ಲಿ ಎದ್ದು ಸಗಣಿಯನ್ನು ಹಾಕಿ ರಂಗೋಲಿಯನ್ನು ಹಾಕುತ್ತಾರೆ. ನಂತರ ಮಾದಿಗರ ಕೇರಿಗಳಲ್ಲಿ ರಾಮ, ಕೃಷ್ಣ, ನಾರಾಯಣ ಮುಂತಾದ ಈ ಯಾವುದೇ ದೇವರುಗಳು ಆ ಹಟ್ಟಿಯಲ್ಲಿ ಇರುವುದಿಲ್ಲ. ಆ ಹಟ್ಟಿಯಲ್ಲಿರುವುದು ಒಂದೇ ಒಂದು ಗುಡಿ. ಅದೇ ದುರುಗವ್ವನ ಗುಡಿ ಇರುತ್ತದೆ. ಇದನ್ನು ಅದೇ ಕೇರಿಯ ಜನರು ಚಪ್ಪಡಿ ಕಲ್ಲುಗಳಿಂದಲೂ ಮಣ್ಣಿನ ಗೋಡೆಗಳಿಂದಲೂ ಒಂದು ಮಂಟಪ ಅಥವಾ ಒಂದು ಗುಡಿಯನ್ನು ಕಟ್ಟಿ ಆ ಗುಡಿಯ ಒಳಗೆ ಒಂದು ಹೆಣ್ಣು ದೇವತೆಯನ್ನು ಕೂಡ್ರಿಸುತ್ತಾರೆ. ನಂತರ ಆ ದುರುಗಮ್ಮನ ಗುಡಿಯಲ್ಲಿ ಪ್ರತಿ ಸಂಜೆ ಹರಳೆಣ್ಣೆ, ಸೊಳ್ಳಿನ ದೀಪ ಮಂದವಾಗಿ ಉರಿಯುತ್ತಿರುತ್ತದೆ. ಈ ಗುಡಿಯನ್ನು ನೋಡಿಕೊಳ್ಳಲು ಹಾಗೂ ಪೂಜೆಯನ್ನು ಮಾಡಲಿಕ್ಕೆ ಒಬ್ಬ ಪೂಜಾರಿಯು ಇರುತ್ತಾನೆ. ಆದ್ದರಿಂದ ಕೇರಿಯ ಜನರೆಲ್ಲರಿಗೂ ಇದು ಒಂದೇ ಗುಡಿಯಾಗಿರುತ್ತದೆ. ನಂತರ ನ್ಯಾಯ ಪಂಚಾಯತಿ, ಒಳ್ಳೆಯದು, ಕೆಟ್ಟದ್ದು ಏನೇ ಇದ್ದರೂ ಇಲ್ಲಿಯೇ ತೀರ್ಮಾನವಾಗುತ್ತದೆ. ನಂತರ ಊರಿನ ಹಿರಿಯರು ಅಥವಾ ಪ್ರಾಯದ ಹುಡುಗರು ಊಟ ಮಾಡಿಕೊಂಡು ರಾತ್ರಿ ಆ ಗುಡಿಯ ಮುಂದೆ ಹಾಡು, ಭಜನೆ, ರಂಗತಾಲೀಮು ಸಹ ಹಾಡುತ್ತಿದ್ದರು. ನಂತರ ವಯಸ್ಸಾದ ಮುದುಕರಿಗೆ ಈ ಗುಡಿಯೇ ವಾಸಸ್ಥಾನ. ಹೀಗೆ ಹಲವಾರು ಸಂಗತಿಗಳನ್ನು ಅವರ ನೆಲೆಗಳನ್ನು ಇಲ್ಲಿ ಕಾಣಬಹುದು.

**೩.೫. ಉಡುಗೆ ತೊಡುಗೆಗಳು**

ಮಾದಿಗರಲ್ಲಿ ಉಡುಗೆ ತೊಡುಗೆಗಳು ಯಾವುದೇ ಬದಲಾವಣೆ ಕಂಡುಬಂದಿಲ್ಲ. ಆದರೆ ಜಾಂಬವ ಹೆಂಗಸರು ಸೀರೆಯ ಸೆರಗನ್ನು ಬಲಗಡೆಗೆ ಹಾಕಿಕೊಂಡರೆ, ಮಾದಿಗರ ಹೆಂಗಸರು ಎಡಗಡೆ ಸೆರಗನ್ನು ಹಾಕಿಕೊಳ್ಳುತ್ತಿದ್ದರು. ನಂತರ ಗಂಡಸರು ಮತ್ತು ಮಕ್ಕಳು ಧರಿಸುವಂತಹ ಉಡುಗೆ ತೊಡುಗೆಗಳು-ಆಭರಣಗಳು ಇತರ ಜನಾಂಗಕ್ಕಿಂತ ಭಿನ್ನವಾಗಿಲ್ಲ. ಎಲ್ಲವೂ ಹೊಲೆಯರಂತೆಯೇ ಇರುತ್ತಾರೆ. ಹಿಂದಿನ ಕಾಲದಲ್ಲಿ ಮಾದಿಗರ ಹೆಂಗಸರು ಒಬ್ಬ ಊರಿನ ರೈತ ಅಥವಾ ಮುಖಂಡ ಏನಾದರೂ ಎದುರಿಗೆ ಬಂದರೆ, ಮೈ ಮೇಲೆ ಇರುವಂತಹ ಸೆರಗನ್ನು ತೆಗೆದುಕೊಂಡು ತಲೆತುಂಬ ಹೊದ್ದುಕೊಂಡು ಸ್ವಲ್ಪ ದೂರ ಸರಿದುಕೊಂಡು ಹೋಗುತ್ತಾಳೆ. ಇದು ಆಗಿನ ಕಾಲದ ಒಂದು ಸಂಪ್ರದಾಯವಾಗಿತ್ತು. ಆದರೆ ಇವತ್ತಿನ ಜಗತ್ತಿನಲ್ಲಿ ಅದು ಬೇರೆಯೇ ಆಗಿದೆ. ಆದರೆ ಇಂತಹ ಒಂದು ಸಂಪ್ರದಾಯ ಕೆಲವೊಂದು ಹಳ್ಳಿಗಳಲ್ಲಿ ತಲೆ ತುಂಬ ಸೆರಗನ್ನು ಹಾಕಿಕೊಂಡು ಓಡಾಡುತ್ತಾರೆ. ಹೊರಗಡೆ ಹೋದರೆ ತಲೆಯನ್ನು ತಗ್ಗಿಸಿಕೊಂಡು ಓಡಾಡುತ್ತಾರೆ. ಬಹಳಷ್ಟು ಹೆಂಗಸರು ಎಡಗಡೆಗೆ ಸೆರಗನ್ನು ಹೊದೆಯುತ್ತಾರಾದರೂ ಹಳಬರು ಮಾತ್ರ ಬಲಗಡೆ ಸೆರಗು ಹೊದೆಯುತ್ತಾರೆ. ಅಲ್ಲದೆ ಮಾದಿಗರಲ್ಲೂ ಇಂದಿಗೂ ವಿಶಿಷ್ಟವಾದ (ಕುಡಿಪೈಟ) ಬಲಗಡೆ ಸೆರಗು ಪದ್ಧತಿಯನ್ನು ಅನುಸರಿಸುತ್ತಾರೆ. ಆದರೆ ಮಾದಿಗರಲ್ಲಿ ಹಳಬರು ಮಾತ್ರ ಯಾವಾಗಲೂ ಕುಡಪೈಟ ಪದ್ಧತಿಯನ್ನೇ ಅನುಸರಿಸಿಕೊಂಡು ಬಂದಿದ್ದಾರೆ. ಆದರೆ ಈಗಿನ ಹುಡುಗಿಯರು ಮತ್ತು ಹೆಂಗಸರು ಹೊರಗಿನ ಪ್ರಪಂಚದ ಕಡೆಗೆ ವಾಲಿದ್ದರಿಂದ ಅವರೆಲ್ಲರೂ ಎಡಗಡೆ ಸೆರಗೇ ಹಾಕಿಕೊಳ್ಳುತ್ತಿದ್ದರು. ವಿಚಿತ್ರವೆಂದರೆ

ಮಾದಿಗರಲ್ಲಿ ಕೂಡ ತಮ್ಮ ೯ ಪಣ ಕಟ್ಟಿಗೆ ಸೇರಿದ ಇನ್ನಿತರ ಜಾತಿಗಳನ್ನು ಹೆಸರಿಸಿ ಅವರು ಇಂದಿಗೂ ಮದುವೆಯ ಸಂದರ್ಭದಲ್ಲಿ ಕುಡಿಪೈಟವನ್ನೇ ಅನುಸರಿಸುತ್ತಿದ್ದರು ಎಂದು ಹೇಳಬಹುದು.

ಈ ಕುಡಿಪೈಟ ತುಂಬಾ ಪೂರ್ವಕಾಲದ ಪದ್ಧತಿಯಾಗಿರುವುದರಿಂದ ಅದನ್ನು ಬಿಡಬಾರದೆಂದು ಮಾದಿಗರಲ್ಲಿ ಮತ್ತು ಹೊಲೆಯರಲ್ಲಿ ದೃಢ ನಿರ್ಧಾರವಾಗಿದೆ. ಅಂದರೆ ಹಳೆ ತಲೆಮಾರಿನ ಹೆಂಗಸರು ಹಾಕಿಕೊಳ್ಳುವಂತಹ ಕುಡಿಪೈಟವನ್ನು ಬಿಡಬಾರದೆಂದು ಆ ಹೆಂಗಸರ ಅಭಿಪ್ರಾಯ. ಆದರೆ ಇವರ ಕುಲದಲ್ಲೇ ಹೊಸ ಪೀಳಿಗೆಯ ಹೆಣ್ಣುಮಕ್ಕಳಿಗೆ ತಮ್ಮಲ್ಲಿನ ಹಳೆಯದರ ಬಗ್ಗೆ ಹೇಳಿದರೆ ಅವರಿಗೆ ತಾತ್ಸಾರವಾಗುತ್ತದೆ. ಏಕೆಂದರೆ ಹೊರಗಿನ ಪ್ರಪಂಚದ ಬೆಡಗುಗಳತ್ತ ತೀವ್ರವಾದ ಆಕರ್ಷಣೆಯನ್ನು ಮೂಡಿಸುತ್ತಾರೆ. ಇಲ್ಲಿ ಹಳೇ ತಲೆಮಾರಿನ ಹೆಂಗಸರು ಎಡ ಸೆರಗನ್ನೇ ಗೌರವದ ಪದ್ಧತಿಯಂತೆ ಅನುಸರಿಸುತ್ತಾ ಬಂದಿದ್ದಾರೆ. ಆದರೆ ಹೊಸ ಪೀಳಿಗೆಯ ತರುಣಿಯರು ಕುಡಿಪೈಟದ ಬಲಸೆರಗನ್ನು ಅತ್ಯಾಧುನಿಕವಾಗಿ ಆವಿಷ್ಕರಿಸಲ್ಪಟ್ಟ ಪ್ಯಾಷನ್‌ಗಳನ್ನು ಈಗಿನ ಹುಡುಗಿಯರು ಮತ್ತು ಹೆಂಗಸರು ಬಳಸುತ್ತಾರೆ. ನಂತರ ಸಾಧಾರಣವಾಗಿ ಯಾರೂ ಚಪ್ಪಲಿ ಮೆಟ್ಟುವುದಿಲ್ಲ. ವಾಚು, ಉಂಗುರ, ಸರಗಳಂತೂ ಹಾಕಿಕೊಳ್ಳುವುದಿಲ್ಲ. ಏಕೆಂದರೆ ಅವರಲ್ಲಿ ಬಡತನ ಎಂಬುದು ತಾಂಡವಾಡುತ್ತಿರುತ್ತದೆ. ಹಾಗೂ ಹೆಂಗಸರಲ್ಲೂ ತಾಳಿಯೊಂದೇ ಇರುತ್ತಿತ್ತು. ಅದು ಮಣಿಸರಗಳಿಂದ ಕೂಡಿಸಿಕೊಂಡು ಕೊರಳಿಗೆ ಹಾಕಿಕೊಳ್ಳುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಹೆಂಗಸರು ಚಿನ್ನದ ತಾಳಿಯನ್ನು ಹಾಕಿಕೊಳ್ಳುತ್ತಾರೆ ಎಂದು ತಿಳಿದುಬರುತ್ತದೆ. ಆಗಿನ ಕಾಲದ ಹೆಣ್ಣುಮಕ್ಕಳು ಸಾಧಾರಣವಾದ ಮಣಿಸರಗಳು, ಬಳೆಗಳು, ಅಗ್ಗದ ಓಲೆಗಳು ಎಲ್ಲಾ ಮಹಿಳೆಯರಲ್ಲೂ ಕಾಣಿಸುತ್ತದೆ. ನಂತರ ಕಾಲುಚೈನು, ಗೆಜ್ಜೆ, ಮೂಗುತಿ, ಕಾಲುಂಗುರ ಮುಂತಾದವುಗಳು ಕೆಲವು ಕುಟುಂಬದವರಲ್ಲಿ ಕಾಣಿಸುತ್ತವೆ. ಅಪರೂಪಕ್ಕೆ ಒಂದೆರಡು ಚಿನ್ನದ ಆಭರಣಗಳು ಇರುತ್ತಿದ್ದವು. ನಂತರ ಮೂವತ್ತು ದಾಟಿದ ಹೆಂಗಸರಲ್ಲಿ ಎಲೆ ಅಡಿಕೆಯ ಚೀಲವು ಸಹ ಇರುತ್ತದೆ. ಮುದುಕಿಯರ ಚೀಲವನ್ನು ನೋಡಿದರೆ, ಅಡಿಕೆ, ಎಲೆ ಹಾಕಿಕೊಳ್ಳುವ ಸ್ಥಳವೇ ಬೇರೆಯಾಗಿರುತ್ತದೆ. ನಂತರ ಕಡ್ಡಿಪುಡಿ ಹಾಕಿಕೊಳ್ಳುವ ಸ್ಥಳವೇ ಬೇರೆಯಾಗಿರುತ್ತದೆ. ಅದೆಲ್ಲವನ್ನು ಸೇರಿ ಒಂದೇ ಚೀಲದಲ್ಲಿ ಹಾಕಿಡುವುದನ್ನು ಕಾಣಬಹುದು.

'ಬಲಗಡೆ ಎಡಗಡೆ ಸೆರಗು' ಹಾಕುವುದನ್ನು ಕುರಿತು ಒಂದು ಕಥೆ ಇದೆ. ಒಂದು ಊರಲ್ಲಿ ಅಣ್ಣ ತಮ್ಮ ಇಬ್ರು ಇದ್ದರಂತೆ. ಅಣ್ಣನಿಗೆ ಮದುವೆ ಆಗಿತ್ತು ತಮ್ಮನಿಗೆ ಆಗಿರಲಿಲ್ಲ. ಹೀಗಿರುವಾಗ ತಮ್ಮನಿಗೂ ಅಣ್ಣನ ಹೆಂಡತಿಗೂ ಸಂಬಂಧ ಬೆಳೆಯಿತು. ಒಬ್ಬರನ್ನೊಬ್ಬರು ಅರೆಗಳಿಗೇನೂ ಬಿಟ್ಟಿರುವುದಕ್ಕೆ ಆಗುವುದಿಲ್ಲ. ಇನ್ನು ಅಣ್ಣನಿಗೆ ಗೊತ್ತಾದ್ರೆ ಸುಮ್ನೆ ಬಿಡೋದಿಲ್ಲ ಎಂದುಕೊಂಡು ತಮ್ಮನಾದವನು ಅವಳನ್ನು ಕರೆದುಕೊಂಡು ದೂರ ಅಂದರೆ ದೇಶಾಂತರ ಹೋಗಿಬಿಟ್ಟ. ಇತ್ತ ಅಣ್ಣನಿಗೆ ಚಿಂತೆ ಬಂತು. ಆಗ ಅವನಿಗೆ ಹುಚ್ಚುಹಿಡಿಯಿತು. ಆ ಹುಚ್ಚಿನಲ್ಲಿಯೇ ಅವರನ್ನು ಹುಡುಕುತ್ತಾ ತಾನೂ ದೇಶಾಂತರ ಹೋಗಿಬಿಟ್ಟ. ಅವರನ್ನು ಹುಡುಕುತ್ತಾ ಆ ತಮ್ಮನೂ ಹೆಂಡತಿನೂ ಸಂಸಾರ ಮಾಡಿಕೊಂಡಿದ್ದ ಊರಿಗೆ ಬಂದ. ಅಷ್ಟರೊಳಗೆ ಏನಾಗಿಬಿಟ್ಟಿತ್ತು ಎಂದರೆ ಅವನ ಗಡ್ಡ ಬೆಳೆದು ಮೊಳದುದ್ದ ಆಗೋಗಿತ್ತು. ತಿರುಗಿ-ತಿರುಗಿ ಕರಗಿ ಕಪ್ಪಾಗಿದ್ದನು. ನಿಲ್ಲುವುದಕ್ಕೆ ನಡುವು ಬರುವುದಿಲ್ಲ. ನಡೆಯುವುದಕ್ಕೆ ಬಲ ಇರುವುದಿಲ್ಲ. ನೀರು ಕುಡಿಯದೆಯೇ ನಾಲಿಗೆ ಬಾಯಾರಿಕೆಯಾಗುತ್ತದೆ. ಆಗ ಸಮೀಪದಲ್ಲಿ ಒಂದು ಮನೆ ಕಾಣಿಸುತ್ತದೆ. ಹತ್ತಿರ ಹೋಗಿ ನೀರು ಕೇಳಿದನು.

ಆಗ ಅವನು ಯಾವ ಮನೆಯಲ್ಲಿ ನೀರು ಕೇಳಿದನೋ ಆ ಮನೆ ಯಾರದು ಎಂದರೆ ಇವನ ಹೆಂಡತಿ ಮತ್ತು ತಮ್ಮನೂ ಬಂದು ಸಂಸಾರ ಮಾಡ್ಕೊಂಡಿದ್ರಲ್ಲ ಅವರ ಮನೇನೆ. ಇವರ ಧ್ವನಿ ಕೇಳಿ ತಮ್ಮನಾದವನು ಹಿಂದಕ್ಕೆ ತಿರುಗಿ ನೋಡಿದ. ನೋಡಿದರೆ ಅಣ್ಣ. ಏನು ಮಾಡುವುದು ನೀರು ಕೊಟ್ಟರೆ ಗುರುತು ಸಿಗುತ್ತದೆ. ಕೊಡದೆ ಹೋದರೆ ಅಣ್ಣನ ಪ್ರಾಣ ಹೋಗುತ್ತದೆ ಎಂದನು. ಆಗ ತಮ್ಮನು ಒಂದು ಉಪಾಯವನ್ನು ಮಾಡಿದ. ತನ್ನ ಹೆಂಡತಿಗೆ ಎಲ್ಲಾ ವಿಷಯವನ್ನು ಹೇಳಿದ. ಹಿಂಗ ಅಣ್ಣ ಬಂದಿದ್ದಾನೆ. ನೀನು ಹಿಂಗೆ ಹೋಗಿ ನೀರು ಕೊಟ್ಟರ ಗುರುತು ಹಿಡಿಯುತ್ತಾನೆ. ಕೊಡದೆ ಹೋದರೇ ಅವನು ಸತ್ತು ಹೋಗುತ್ತಾನೆ. ಆಗಾಗಿ ನೀನು ಬಲಗಡೆ ಹಾಕಿಕೊಂಡಿರುವ ಸೆರಗನ್ನು ಎಡಗಡೆಗೆ ಹಾಕಿಕೊಂಡು ಹೋಗಿ ನೀರು ಕೊಡು ಎಂದನು. ಆಗ ಅವಳು ಬಲಗಡೆಗೆ ಇದ್ದ ಸೆರಗನ್ನು ಎಡಗಡೆಗೆ ಹಾಕಿಕೊಂಡು ನೀರನ್ನು ಕೊಟ್ಟಳು. ಆಗ ಅಣ್ಣನಿಗೆ ಅವಳ ಗುರುತು ಸಿಗಲಿಲ್ಲ. ಆಗ ಅವನು ಮುಂದಕ್ಕೆ ಹೋಗಿ ಬಿಟ್ಟನು. ಆಗ ತಮ್ಮನೂ ಅತ್ತಿಗೇನೂ ಬಚಾವಾದರು. ಅಂದಿನಿಂದ ಇವತ್ತಿನವರೆಗೂ ಎಡಗಡೆ ಸೆರಗೇ ಆಗೋಯ್ತು.*

೩.೬. ನ್ಯಾಯ ಪದ್ಧತಿ

ಮಾದಿಗ ಸಮುದಾಯದವರು ತಮ್ಮದೇ ಆದ ಸಾಮಾಜಿಕ ರಚನೆಯನ್ನು ಹೊಂದಿದ್ದಾರೆ. ಅವರು ನ್ಯಾಯ ಕಟ್ಟೆಯ ನ್ಯಾಯಾಧೀಶರು ಹೇಳಿದಂತೆ ನಡೆಯುತ್ತಾರೆ. ತಮ್ಮ ಕೇರಿಗಳಲ್ಲಿ ಆಂತರಿಕ ಮತ್ತು ಬಾಹ್ಯ ವಿಷಯಗಳ ಕುರಿತು ಆಗಾಗ ಚರ್ಚೆ ನಡೆಸುತ್ತಾರೆ. ಸಾಮಾಜಿಕ ನಿಯಮಗಳ ಉಲ್ಲಂಘನೆ ಮಾಡಿದರೆ ಆ ವ್ಯಕ್ತಿಗೆ ಅಥವಾ ಅವರ ಕುಟುಂಬಕ್ಕೆ ಶಿಕ್ಷೆಯನ್ನು ಕೊಡುತ್ತಿದ್ದರು.

ಆದ್ದರಿಂದ ಈ ಸಮುದಾಯವು ತಮ್ಮ ನಡುವಣ ಯಾವುದೇ ರೀತಿಯ ಒಳಜಗಳಗಳು ವಾಜ್ಯ ನ್ಯಾಯಗಳನ್ನು ಇತರೆ ಬುಡಕಟ್ಟುಗಳಂತೆ ಅವರೇ ತೀರ್ಮಾನಿಸಿಕೊಳ್ಳುತ್ತಾರೆ. ತಮ್ಮ ಬುಡಕಟ್ಟು ಜನಾಂಗದವರು ಯಾರೇ ಆಗಲಿ ಅವರಿಗೆ ಒಗ್ಗಟ್ಟು ಅವಶ್ಯಕವಾಗಿರುತ್ತದೆ. ಇವರ ಮನೆ ಮತ್ತು ಕುಲಗಳಲ್ಲಿ ಜಗಳ ಅಥವಾ ವಾಜ್ಯಗಳು ಜರುಗಿದರೆ ಅದು ಗುಂಪಿನಿಂದ ಹೊರಗೆ ಹೋಗುವಂತಿಲ್ಲ. ಅಲ್ಲಿಯೇ ತೀರ್ಮಾನಾವಗಿಬಿಡಬೇಕು. ಎಷ್ಟೇ ದೊಡ್ಡ ಜಗಳ ಆದರೂ ಸಹ ಇತರ ಸ್ಥಳಗಳಲ್ಲಿರುವ ತಮ್ಮ ಕುಲದ ಯಜಮಾನರುಗಳಿಂದ ಆ ಜಗಳವನ್ನು ಸಮ್ಮನಿರಿಸುತ್ತಾರೆ. ಈ ರೀತಿಯ ನ್ಯಾಯ ವ್ಯವಸ್ಥೆ ಮತ್ತು ಬಿಗಿ ಭದ್ರತೆ ಇರುವುದರಿಂದಲೇ ಇಂದಿಗೂ ಬುಡಕಟ್ಟು ಸಮುದಾಯಗಳಲ್ಲಿ ಯಾವುದೇ ರೀತಿಯ ಜಗಳ ಕಲಹಗಳು ಆಗದೇ ಸಂತೋಷದಿಂದ ಜೀವನವನ್ನು ಸಾಗಿಸುತ್ತಾರೆ.

ಹಿಂದೆ ಇವರಲ್ಲಿ ಯಾರಾದರೂ ಅಪರಾಧ ಮಾಡಿದರೆ ದಂಡವನ್ನು ವಿಧಿಸುತ್ತಿದ್ದರು. ಹೆಣ್ಣುಮಕ್ಕಳು ಮದುವೆಯಾಗಿ ತಮ್ಮ ಗಂಡನ ಮನೆಗೆ ಹೋಗದಿದ್ದರೆ ಕೇರಿಯ ಯಜಮಾನರೆಲ್ಲರೂ ಸೇರಿಕೊಂಡು ನ್ಯಾಯ ತೀರ್ಮಾನವನ್ನು ಮಾಡಿ ಅವಳನ್ನು ಗಂಡನ ಮನೆಗೆ ಕಳುಹಿಸುವರು. ಅವಳು ಏನಾದರೂ ನ್ಯಾಯ ತೀರ್ಮಾನಕ್ಕೆ ಬದ್ಧಳಾಗದೇ ಅಥವಾ ಗಂಡನ ಮನೆಗೆ ಹೋಗದೇ ಇದ್ದರೆ, ಕೈ ಕಾಲನ್ನು ಕಟ್ಟಿ ಎತ್ತಿನ ಗಾಡಿಯೊಳಗೆ ಹಾಕಿ ಗಂಡನ ಮನಗೆ ಕಳುಹಿಸುತ್ತಿದ್ದರು. ನಂತರ ಅವಳ ಗಂಡನ ತಪ್ಪಿದ್ದರೆ ಅವನಿಗೆ ದಂಡವನ್ನು ಹಾಕಿ ಅವರಿಬ್ಬರನ್ನು ಒಂದುಗೂಡಿಸುತ್ತಾರ. ಈ ಸಮುದಾಯದಲ್ಲಿಯ ಅಪರಾಧಿಗಳಿಗೆ ಕಟ್ಟೆಮನೆ ಅಥವಾ ಹಿರಿಯರ ಭಯವಿಲ್ಲದಿದ್ದರೂ ದೇವರಿಗೆ ಭಯ ಪಡುತ್ತಾರೆ. (ದೇವರ ಮೇಲಿನ ಭಕ್ತಿ) ಇಂದಿಗೂ ಈ ಸಮುದಾಯದಲ್ಲಿ ಯಾವುದೇ ಹಬ್ಬ ಜಾತ್ರೆಗಳು ನಡೆಯಬೇಕಾದರೆ ನೇಮಿಸಲ್ಪಟ್ಟ ಯಜಮಾನರ ಮುಖಾಂತರ ಅಥವಾ ಹಿರಿಯರ ಮುಖಾಂತರ ನಡೆಯುತ್ತವೆ. ಜಾತ್ರೆ ಹಬ್ಬಗಳಿಗೆ ತಗಲುವ ವೆಚ್ಚವನ್ನು ಅವರ ಸಮುದಾಯದಲ್ಲಿ ಬಡವರಿಗಾಗಲೀ, ಶ್ರೀಮಂತರಾಗಲೀ, ಯಾರಾದರೂ ಸಹ ಯಜಮಾನರು ಎಷ್ಟು ಕೇಳುತ್ತಾರೋ ಅಷ್ಟು ಪ್ರತಿ ಕುಟುಂಬದವರು ಕೊಡಬೇಕಾಗುತ್ತದೆ.

ಮಾದಿಗ ಸಮುದಾಯದಲ್ಲಿ ಹೆಣ್ಣುಮಕ್ಕಳು ತನ್ನ ಕುಲದಿಂದ ಬೇರೆ ಜಾತಿಯವರನ್ನು ಏನಾದರೂ ಮದುವೆ ಆದರೆ ಅವಳನ್ನು ಈ ಕೇರಿಯಿಂದ ಮತ್ತು ಕುಲದಿಂದ ಹೊರಹಾಕುತ್ತಾರೆ. ಒಂದು ವೇಳೆ ಅವರ ಕುಲದಲ್ಲೇ ಏನಾದರೂ ಮದುವೆ ಆದರೆ ಅಂದರೆ, ಅವರಲ್ಲೇ ಕೆಲವು ಬೆಡಗುಗಳು ಬರುತ್ತವೆ. ಆ ಬೆಡಗಿನ ಮುಖಾಂತರ ಮದುವೆಯಾದರೆ ಮಾತ್ರ ದಂಡ ವಿಧಿಸುವಂತಿಲ್ಲ. ನಂತರ ಹಿಂದೆ ಈ ಸಮುದಾಯದಲ್ಲಿ ಯಾರಾದರೂ ಕೋಳಿ ತಿಂದರೆ, ಮಧ್ಯಪಾನ ಮಾಡಿದರೆ, ದಂಡ ಹಾಕುವ ಪದ್ಧತಿ ರೂಡಿಯಲ್ಲಿತ್ತು. ಆದರೆ ಇಂದಿಗೂ ಕೂಡ ಕೆಲವರು ದೊಡ್ಡಮಾಂಸವನ್ನು ತಿನ್ನುತ್ತಾರೆ. ಇನ್ನು ಕೆಲವರು ಈ ಮಾಂಸವನ್ನು ತಿನ್ನುವುದಿಲ್ಲ.

ಆದ್ದರಿಂದ ಮಾದಿಗ ಸಮುದಾಯದಲ್ಲೂ ಸಹ ಇಂದಿಗೂ ಕೆಲವು ಸಂಪ್ರದಾಯಗಳನ್ನು ಮತ್ತು ನಂಬಿಕೆಗಳನ್ನು ಉಳಿಸಿಕೊಂಡು ಬಂದಿದ್ದಾರೆ.

ಮಾದಿಗ ಸಮುದಾಯದ ಕಟ್ಟೆಮನೆ

ದೇವ ಸಮುದ್ರದ ಕಟ್ಟೆಮನೆ ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

ರಾಮಸಾಗರ ಕಟ್ಟೆಮನೆ ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

ನಾಗಸಮುದ್ರ ಕಟ್ಟೆಮನಿ ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ

ಹೀಗೆ ಮೊಳಕಾಲ್ಮೂರು ತಾಲ್ಲೂಕು ದೇವಸಮುದ್ರದ ಕಟ್ಟೆಮನೆಗೆ ಯಜಮಾನ ಅಥವಾ ಊರಿನ ಮುಖಂಡ ಎಂದು ಕರೆಯುತ್ತಾರೆ. ನಂತರ ಅದೇ ತಾಲ್ಲೂಕಿನಲ್ಲಿ ರಾಮಸಾಗರದಲ್ಲಿ ಅಲ್ಲಿಯೂ ಸಹ ಊರಿನ ಹಿರಿಯ

ಮುಖಂಡನನ್ನಾಗಿ ನೇಮಿಸುತ್ತಾರೆ. ಊರಿನಲ್ಲಿ ಏನಾದರೂ ತೊಂದರೆ ಆದರೆ ಆ ಹಿರಿಯ ಮುಖಂಡನಿಗೆ ಹೇಳಬೇಕಾಗುತ್ತದೆ.

**೩.೭. ಕಸುಬು**

ಮಾದಿಗರು ನಿರ್ದಿಷ್ಟವಾಗಿ ಸಾಂಪ್ರದಾಯಿಕ ಕಸುಬಿನಿಂದಾಗಿಯೇ ಈ ಜನಾಂಗಕ್ಕೆ ಮಾದಿಗರು ಎಂಬ ಹೆಸರು ಬಂದಿರುವುದು ಸ್ಪಷ್ಟ. ಮಾದಿಗ ಕುಲಗಳ ಮದುವೆಯ ಸಂದರ್ಭದಲ್ಲಿ ತಂಗಡಿ ದ್ಯಾವರನ್ನು ಮತ್ತು ಯಲ್ಲಮ್ಮನಿಗೆ ಕಾಯಿಯನ್ನು ಕೊಟ್ಟು ಪೂಜೆಯನ್ನು ಮಾಡುತ್ತಿದ್ದರು. ಹಾಗೆಯೇ ಪಣಕಟ್ಟು ವ್ಯವಸ್ಥೆಯ ಪ್ರವರ್ಧಮಾನ ಕಾಲದಲ್ಲಿ ಎಡಗೈ ಪಣಕಟ್ಟಿನ ಕುಲ ಚಿಹ್ನೆಗಳನ್ನು ಹೊರುವ ಅಧಿಕೃತ ವಾರಸುದಾರಿಕೆಯೂ ಇವರಲ್ಲಿದೆ. ಇವರು ಮೂಲತಃ ಪ್ರದರ್ಶಕ ಕಲಾವಿದರು.

ಇವರ ಪ್ರದರ್ಶನ ಪರಿಣಿತಿಯನ್ನು ಆಧರಿಸಿಯೇ ಇವರಿಗೆ ಈ ಹೆಸರು ನಿಂತಿರುವುದು. ಮಾದಿಗರ ಪೂರ್ವಜರು ಇವರ ಕುಲಕ್ಕೆ ಅತೀ ಮುಖ್ಯವಾದ ಎಲ್ಲಮ್ಮ ಅಥವಾ ಮಾರೆಮ್ಮ ಎಂಬ ಶಕ್ತಿಯ ವೇಷವನ್ನು ಹಾಕಿಕೊಂಡು ಶಿವನ ಬಳಿ ಕುಣಿಯುತ್ತಾ ಹೋದದ್ದರಿಂದಾಗಿಯೇ ಇವರಿಗೆ ಈ ಹೆಸರು ಬಂದಿತು. ನಂತರ ವಂಶಪಾರಂಪರ್ಯವಾಗಿ ಮಾದಿಗರು ಮಾಡುತ್ತಾ ಬಂದಿರುವ ವೃತ್ತಿಗಳನ್ನು ಕೆಲವು ಶಾಸನಗಳಲ್ಲಿ ಮತ್ತು ಸಾಹಿತ್ಯ ಕೃತಿಗಳಲ್ಲಿ ಹಾಗೂ ಜನಪದ ತ್ರಿಪದಿಗಳಲ್ಲಿ ಉಲ್ಲೇಖಗೊಂಡಿವೆ. ತಲೆತಲಾಂತರದಿಂದ ಬಂದ ಮಾದಿಗರೆಲ್ಲರೂ ಚರ್ಮದ ಕೆಲಸದಲ್ಲಿ ಅಷ್ಟೇ ಅಲ್ಲ ಬೇರೆ ಬೇರೆ ವೃತ್ತಿಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.*

ಮಾದಿಗರು ಆಗಿನ ಕಾಲದಲ್ಲಿ ಊರಿನ ಮುಖಂಡನ ಮನೆಯಲ್ಲಿ ಅಥವಾ ಊರ ಗೌಡನ ಮನೆಯಲ್ಲಿ ಮಾದಿಗರು ಜೀತದಾಳುಗಳಾಗಿ ದುಡಿಯುತ್ತಿದ್ದರು. ಏಕೆಂದರೆ ಅವರು ಬಹಳ ಬಡತನದಿಂದ ಜೀವನವನ್ನು ಸಾಗಿಸುತ್ತಿದ್ದರು. ಇದರಿಂದ ಬೇರೆಯವರ ಮನೆಯಲ್ಲಿ ಕೆಲಸ ಮಾಡಲು ಆಸಕ್ತರಾದರು. ಈ ಸಮುದಾಯದವರು ಎಲ್ಲೇ ಹೋದರೂ ಸಹ ಅವರನ್ನು ಕೀಳುಮಟ್ಟದಿಂದ ಮೇಲ್ವರ್ಗದ ಜನರು ಅವರನ್ನು ನೋಡುತ್ತಿದ್ದರು. ಆಗ ಬರುಬರುತ್ತಾ ತನ್ನ ಸ್ವಂತ ಕಾಯಕವನ್ನು ಮಾಡಲು ಸಿದ್ಧರಾದರು. ಆವತ್ತಿನಿಂದ ಇವತ್ತಿನವರೆಗೂ ಸಾಹುಕಾರನ ಮನೆಯಲ್ಲಿ ಜೀತದಾಳಾಗಿ ದುಡಿಯಲು ನಿರಾಕರಿಸಿದರು. ಏಕೆಂದರೆ ತನ್ನ ಸ್ವಂತ ಕೈ ಕಸುಬನ್ನಾಗಿ ಮಾಡಿಕೊಂಡು ಜೀವನವನ್ನು ಸಾಗಿಸುತ್ತಾರೆ.

ಸಾಹಿತ್ಯ ಕೃತಿಗಳಲ್ಲಿಯೂ ಮಾದಿಗರ ಕಸುಬನ್ನು ಕುರಿತು ಕೆಲವು ಉಲ್ಲೇಖಗಳಿವೆ. ಮಾದಿಗರು ತೊಗಲನ್ನು ಹದ ಮಾಡುವ ಮತ್ತು ಅದರಿಂದ ಬಾರುಗಳನ್ನು ತಯಾರಿಸುವ ಕೆಲಸವನ್ನು ಮಾದಿಗ ಸಮುದಾಯದವರು ಮಾಡುತ್ತಿದ್ದರು.

ಮಾದಿಗರ ಬಗ್ಗೆ ನಯಸೇನನು ಒಂದು ಮಾತನ್ನು ಹೇಳುತ್ತಾನೆ.  
ಮಾದಿಗನಂತೆ ಬಾರೆತ್ತುವರ್, ಕಿಂದಪ್ಪ ವ್ರತವಿಂಗಂ ದೆರೆಗಿದ  
ಮೊದೆಗನು ಮಗ್ಗದ ವ್ಯಂತ್ಯಂಗೆ*

ಅಂದರೆ ಮಾದಿಗರು ಕೀಳುಮಟ್ಟದಿಂದ ಬಂದವರಾಗಿದ್ದಾರೆ ಎಂದು ಹೇಳುವುದು ಈ ಪದ್ಯದ ಆಶಯವಾಗಿದೆ.

ಮಾದಿಗರು ಹರಿಗೋಲು ಚರ್ಮದ ಪಾದರಕ್ಷೆಗಳು, ಮಿಣಿ, ಬಾರುಕೋಲು, ಮೃದಂಗ, ನಗಾರಿ ಇತ್ಯಾದಿ ಚರ್ಮ ವಾದ್ಯಗಳು ಈ ಸಮುದಾಯದವರು ಉಪಯೋಗಿಸುತ್ತಿದ್ದರು. ನಂತರ ಎಣ್ಣೆ-ತುಪ್ಪಗಳನ್ನು ತುಂಬಲು ಉಪಯೋಗಿಸುತ್ತಿದ್ದ ಸಿದ್ದಲಿಕೆ-ಬುದ್ದಲಿಕೆಗಳೆಂಬ ಚರ್ಮದ ಚೀಲಗಳು ಉಪಯೋಗಿಸುತ್ತಿದ್ದರು. ಏಕೆಂದರೆ ಮಾದಿಗರು ಬೇರೆ ಬೇರೆ ಉಪಕಸುಬುಗಳನ್ನು ಮಾಡಿಕೊಂಡು ಜೀವನವನ್ನು ಸಾಗಿಸುತ್ತಿದ್ದರು. ಇದರಿಂದ ಸಾಮಾಜಿಕ ಅಥವಾ ಸಮಾಜ ಸುಧಾರಣೆಯಿಂದ ನೋಡಿಕೊಂಡು ಹೋಗುತ್ತಿದ್ದರು. ಆದರೆ ವಂಶಪಾರಂಪರ್ಯದಿಂದ ಈ ವೃತ್ತಿಯನ್ನು ಮಾದಿಗರು ಮಾಡುತ್ತಿರುವುದು ಗಮನಾರ್ಹವಾಗಿದೆ. ಆದರೆ ಹೊಲೆಯರು ಎಂದೂ ಚರ್ಮದ ಕೆಲಸವನ್ನು ಮಾಡಿದವರಲ್ಲ. ಅಂತಹ ನಿದರ್ಶನಗಳೂ ಕೂಡ ಎಲ್ಲಿಯೂ ಸಿಗುವುದಿಲ್ಲ. ಆದ್ದರಿಂದ ಬಹುಶಃ ಅಂಬಿಗರ ಚೌಡಯ್ಯ ಹೊಲೆಯ ಎಂಬ ಖ್ಯಾತಿಗೆ ಪಾತ್ರರಾಗಿರಬೇಕು ಎಂದು ತಿಳಿದು ಬರುತ್ತದೆ.

ಇತ್ತೀಚಿಗೆ ಆಧುನಿಕ ಮನರಂಜನಾ ಮಾಧ್ಯಮವಾದ ಸಿನಿಮಾಗಳ ಪ್ರಭಾವದಿಂದ ಜನಪ್ರಿಯತೆ ಕುಗ್ಗುತ್ತಾ ಬಂದಿದ್ದರಿಂದ ಮಾದಿಗರು ಬೇರೆ ಬೇರೆ ಕಸುಬುಗಳಿಗೆ ಹೋಗಿದ್ದಾರೆ. ಅನೇಕರು ಕೃಷಿ ಕೂಲಿಗಳಾಗಿದ್ದಾರೆ. ಕೆಲವರು ಹಳ್ಳಿಗಳಲ್ಲಿ ಬಯಲಾಟ ಕಲಿಸುವ ಮೇಷ್ಟ್ರುಗಳಾಗಿದ್ದಾರೆ. ನಂತರ ದನಗಳನ್ನು ಕಾಯುವವರು ಆಗಿದ್ದಾರೆ. ಅನಕ್ಷರಸ್ಥರೂ ಆಗಿದ್ದಾರೆ. ತಬಲ ಮುಚ್ಚುವುದು, ಹಾರ್ಮೋನಿಯಂ ರಿಪೇರಿ ಮಾಡುವ ಕೆಲಸವನ್ನು ಇವರು ಮಾಡುತ್ತಾರೆ. ಇದರಿಂದ ಜೀವನವನ್ನು ಸಾಗಿಸುತ್ತಾರೆ.

ಒಂದು ಕಾಲಕ್ಕೆ ಮಾದಿಗರ ಆಚರಣೆಯಲ್ಲಿದ್ದ ಕಲಾನೈಪುಣ್ಯವನ್ನೇ ರಂಗಕ್ಷೇತ್ರಕ್ಕೂ ವಿಸ್ತರಿಸಿಕೊಂಡು ಆ ಮೂಲಕ ನೂರಾರು ವರ್ಷಗಳ ಕಾಲ ಜನಪದರ ಕಲ್ಪನಾ ಸಾಮ್ರಾಜ್ಯವನ್ನು ಆಳಿದ ಕಲಾಪಟುಗಳು ಇಂದು ಜೀವನ ನಿರ್ವಹಣೆಗೆ ಉಳಿದ ಗ್ರಾಮೀಣ ಬಡಜನರಂತೆಯೇ ಕಾಣಿಸುತ್ತಾರೆ. ಮಾದಿಗರಲ್ಲಿಯೇ ತಾವು ಶ್ರೇಷ್ಠರೆಂದು ಹೇಳುವ ಆದಿಜಾಂಬವರ ಪ್ರಮುಖ ವೃತ್ತಿ ಚರ್ಮವನ್ನು ಹದಮಾಡುವುದು. ಸತ್ತ ಪ್ರಾಣಿಯ ಚರ್ಮವನ್ನು ಸುಲಿಯುವುದು ಅದನ್ನು ಹದಗೊಳಿಸುವುದು, ಅದರಿಂದ ಹಗ್ಗ, ಮಿಣಿ, ಜತ್ತಿಗೆ ಮುಂತಾದ ಸಾಮಾಗ್ರಿಗಳನ್ನು ತಾವು ಸಿದ್ಧಪಡಿಸಿ ರೈತರಿಗೆ ಕೊಟ್ಟು ಆಯ ಪಡೆಯುವುದಾಗಿ ಹೇಳುತ್ತಾರೆ.

ಗೌಡನ ಮನೆಯಲ್ಲಿ ಏನಾದರೂ ದನಕುರಿಗಳು ಸತ್ತರೆ, ಗೌಡನ ಒಕ್ಕಲಾದ ಮಾದಿಗರು ಆ ದನ ಕರುಗಳನ್ನು ಊರ ಹೊರಗೆ ತೆಗೆದುಕೊಂಡು ಹೋಗಿ ಅದರ ಚರ್ಮ ಬಿಡಿಸಿ, ಆ ಚರ್ಮದಿಂದ ಚಪ್ಪಲಿಗಳನ್ನು ಹಾಗೂ ರೈತರಿಗೆ ಒಕ್ಕಲುತನಕ್ಕೆ ಅವಶ್ಯಕವಾಗಿರುವ ಉಪಕರಣಗಳನ್ನು ಮಾಡುವುದರಲ್ಲಿ ಮಾದಿಗರು ನಿಪುಣರು. ನಂತರ ಎಮ್ಮೆಯ ತೊಗಲಿನಿಂದ ಎಕ್ಕಡ (ಚಪ್ಪಲಿ) ಎತ್ತು ಮತ್ತು ಹಸುವಿನ ತೊಗಲಿನಿಂದ ಜತ್ತಿಗೆ ಬಾರು, ಬಾರಕೋಲು, ಗೆಜ್ಜೆಸರ, ಹಂತಿ ಕಣ್ಣಿಗಳನ್ನು ತಯಾರಿಸುತ್ತಿದ್ದರು. ಹಾಗೂ ಕೋಣದ ಚರ್ಮದಿಂದ ಮಟ್ಟೆ, ಮಿಣಿ, ಸಣ್ಣಬಾರು ಮುಂತಾದವುಗಳನ್ನು ತಯಾರಿಸುತ್ತಿದ್ದರು. ಈ ಚರ್ಮದಿಂದ ಸ್ವಲ್ಪ ಹಸಿ ಇರುವಾಗಲೇ ಮಾಡಿದರೆ ಹಲಗೆಯನ್ನು ಮಾಡಿ ನಂತರ ಅದನ್ನು ಒಣಗಿಸಿ ನಂತರ ಕಾಯಿಸಿ ಬಡಿದಾಗ ಅದರ ನಾದವು ಝೇಂಕರಿಸುವುದು. ಈ ಉಪಕರಣಗಳನ್ನು ಮಾಡಲಿಕ್ಕೆ ಮಾದಿಗರು ಕೆಲವು ಆಯುಧಗಳನ್ನೆಲ್ಲ ಮಾಡಿಕೊಂಡಿರುತ್ತಾರೆ. ಅವುಗಳೆಂದರೆ, ಉಳಿ, ರಂಪಿಗೆ, ಅಡಿಗಲ್ಲು, ಗೂಟ, ಕೊಡತಿ ಇವು ಸಹಾಯಕ ಸಲಕರಣೆಗಳಾಗಿವೆ. ಹೀಗೆ ಮಾದಿಗರು ಅನೇಕ ರೀತಿಯಿಂದ ಕಸುಬುಗಳನ್ನು ಮಾಡಿಕೊಂಡು ಜೀವನವನ್ನು ಸಾಗಿಸುತ್ತಾರೆ.

ಮಾದಾರ ಚನ್ನಯ್ಯನ ಕೈಯುಳಿ ಕತ್ತಿ ಅಡೆಗುಂಟಕ್ಕಡಿಯಾಡಬೇಡ

ಅರಿ ನಿಜಾತ್ಮ ರಾಮನಾಮ ಎಂಬ ವಚನದಲ್ಲಿ ಮಾದರ ಕಸುಬಿನ ಕೆಲವು ಆಯುಧಗಳ ಉಲ್ಲೇಖ ಬರುತ್ತದೆ.*

ಮಾದಿಗರಲ್ಲಿ ಎಲ್ಲರೂ ಚರ್ಮದ ಕೆಲಸವನ್ನೇ ಮಾಡುತ್ತಾರೆ ಎಂದಲ್ಲ. ಕೆಲವರು ಒಕ್ಕಲುತನ, ವ್ಯಾಪಾರ, ಕೂಲಿ ಮುಂತಾದ ಕೆಲಸಗಳಲ್ಲಿ ಮಾದಿಗರು ತೊಡಗಿರುವುದು ಕಂಡುಬರುತ್ತದೆ. ಒಂದೊಂದು ಪಂಗಡದವರು ತಮ್ಮ ತಮ್ಮ ಕಸುಬುಗಳನ್ನು ಚಾಚು ತಪ್ಪದೆ ಕೆಲಸ ಮಾಡುತ್ತಾ ಬಂದಿದ್ದಾರೆ.

**ರಕ್ತಸಂಬಂಧ**

ಕಣ್ಣರಿಯದಿದ್ದರೂ ಕಳ್ಳರಿಯುತ್ತದೆ ಎಂಬ ಜಾನಪದರ ಮಾತಿನಂತೆ ಮಾದಿಗರ ಸಮುದಾಯದಲ್ಲಿ ಕರಳುಬಳ್ಳಿ ಅಥವಾ ರಕ್ತಸಂಬಂಧಗಳಿಗೆ ಬಹಳ ಪ್ರಾಮುಖ್ಯತೆ ಇದೆ. ಈ ಸಮುದಾಯದಲ್ಲಿ ಪಿತೃಪ್ರಧಾನ ಕುಟುಂಬಗಳು ಕಂಡುಬರುವುದರಿಂದ ತಂದೆಯ ಮೂಲಕವೇ ರಕ್ತ ಸಂಬಂಧವನ್ನು ಗುರುತಿಸಿಕೊಳ್ಳುತ್ತಾರೆ. ತಂದೆಯ ನಂತರ ಗಂಡು ಸಂತತಿಯ ಮೂಲಕ ಕುಟುಂಬ, ವಂಶ, ಕುಲ, ಗೋತ್ರ, ಮನೆದೇವರು, ವಂಶಾವಳಿ, ಏಕರಕ್ತ ಸಂಬಂಧ, ವಿವಾಹ ಮೊದಲಾದ ಸಾಮಾಜಿಕ ಅಂಶಗಳು ರಕ್ತಸಂಬಂಧದ ಆಧಾರದ ಮೇಲೆಯೇ ರಚಿತವಾಗಿರುತ್ತದೆ. ತಂದೆ-ತಾಯಿಯ, ಅಕ್ಕ-ತಂಗಿ, ಅಣ್ಣ-ತಮ್ಮ, ಚಿಕ್ಕಪ್ಪ-ದೊಡ್ಡಪ್ಪ, ಅತ್ತೆ-ಮಾವ ಮುಂತಾದವರ ಸುತ್ತ ಕುಟುಂಬ ಮತ್ತು ರಕ್ತಸಂಬಂಧ ಕೇಂದ್ರೀಕೃತವಾಗಿರುತ್ತದೆ. ನಾವೆಲ್ಲರೂ ಒಂದೇ ರಕ್ತ ಸಂಬಂಧಿಗಳು, ಒಡನಾಡಿಗಳು, ಕುಟುಂಬದವರು, ವಂಶದವರು, ನೆಂಟರು ಅಣ್ಣತಮ್ಮಗಳು, ಎಂಬ ಅಭಿಮಾನ ಮಾದಿಗ ಸಮುದಾಯದಂಥ ಬುಡಕಟ್ಟು ಮೂಲದ ಸಮೂಹಗಳಲ್ಲಿ ಪ್ರಧಾನವಾಗಿರುತ್ತದೆ.

ಒಂದು ಸಮೂಹ ಅಥವಾ ಒಂದು ಕೇರಿಯ ಸದಸ್ಯರೆಲ್ಲರೂ ರಕ್ತಸಂಬಂಧಿಗಳೇ ಆಗಿರುವುದರಿಂದ ಅವರಲ್ಲಿ ಪ್ರೀತಿ ವಿಶ್ವಾಸಗಳಿಂದ ಕೂಡಿದ ಸಹಕಾರ ಮತ್ತು ಸಂಬಂಧಗಳು ಬೆಳೆದಿರುತ್ತವೆ. ಬಹಳ ಹಿಂದೆ ಗ್ರಾಮಾಂತರ ಪ್ರದೇಶದ ಅವಿಭಕ್ತ ಕುಟುಂಬಗಳಲ್ಲಿ ಒಗ್ಗಟ್ಟು ಮತ್ತು ಐಕ್ಯತೆ ಮೂಡಲು ರಕ್ತ ಸಂಬಂಧವೇ ಮುಖ್ಯ ಕಾರಣವಾಗಿತ್ತು. ವೈವಾಹಿಕ ಸಂಬಂಧಗಳನ್ನು ಬೆಳಸುವಾಗ ಒಳಪಂಗಡ ವಿವಾಹ ಅಥವಾ ಒಳಬಾಂಧವ್ಯ ವಿವಾಹ ಪದ್ಧತಿಗೆ ಹೆಚ್ಚು ಮಹತ್ವ ಕೊಡುತ್ತಾರೆ. ಅಂತರ್ಜಾತಿಯ ವಿವಾಹಕ್ಕೆ ಇವರಲ್ಲಿ ಅವಕಾಶವಿರಲಿಲ್ಲ. ಹತ್ತಿರದ ರಕ್ತಸಂಬಂಧದಲ್ಲಿ 'ಶೆರ' ಕೊಟ್ಟು ಹೆಣ್ಣು ತರುತ್ತಾರೆ. ಆದರೂ ಬಾಲ್ಯವಿವಾಹ ಪದ್ಧತಿ ಇವರಲ್ಲಿ ಕಂಡುಬರುವುದಿಲ್ಲ. ಏಕಪತ್ನಿತ್ವ, ಬಹುಪತ್ನಿತ್ವ ವಿವಾಹ ಪದ್ಧತಿ ಆಚರಣೆಯಲ್ಲಿದ್ದರೂ ಏಕ ಪತ್ನಿತ್ವಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ. ತಂದೆಯಷ್ಟೇ ಗೌರವ ಸೋದರತ್ತೆಗೆ ಕೊಡುವ ಸಂಪ್ರದಾಯ ಬೆಳೆದುಕೊಂಡು ಬಂದಿದೆ.'ತಾಯಿ ಸತ್ತ ತಬ್ಬಲಿ ಮಕ್ಕಳಿಗೆ ಸೋದರತ್ತೆಯೇ ತಾಯಿ' ಎಂಬ ಮಾತು ರಕ್ತ ಸಂಬಂಧದ ಪ್ರಾಧಾನ್ಯತೆಯನ್ನು ತೋರುತ್ತದೆ. 'ಕರಳು ಚುರುಕ್' ಎಂದಾಗ ಮಾತ್ರ ಕಣ್ಣಲ್ಲಿ ನೀರು ಬರುತ್ತವೆ ಎಂಬ ಮಾತು ವೈಜ್ಞಾನಿಕ ಸತ್ಯ. ಇದು ರಕ್ತಸಂಬಂಧದ ಮಹತ್ವವನ್ನು ತಿಳಿಸುತ್ತದೆ. ಕುಲ, ಗೋತ್ರ ಬೇರೆಯಾದರೂ ಮೂಲತಃ ಒಂದೇ ಕುಟುಂಬದ ರಕ್ತ ಸಂಬಂಧಗಳಂತೆ ಬಾಳಿ ಬದುಕುವ ಸಂಸ್ಕೃತಿ ಮಾದಿಗ ಸಮುದಾಯದಲ್ಲಿ ಕಾಣಬಹುದು.

ಪ್ರಾಚೀನ ಭಾರತೀಯ ಸಮಾಜದಲ್ಲಿ ಬಾಲ್ಯವಿವಾಹ ಪದ್ಧತಿ ಅಸ್ತಿತ್ವಕ್ಕೆ ಬಂದಿದ್ದು ಈ ರಕ್ತ ಸಂಬಂಧವು ಒಂದು ಕಾರಣವಾಗಿದೆ. ಅಪ್ಪ ಹಾಕಿದ ಆಲದ ಮರಕ್ಕೆ ನೇಣು ಹಾಕಿಕೊಳ್ಳುವಂತೆ ಹಿರಿಯ ಯಜಮಾನರು ಸಾಯುವುದರೊಳಗೆ ಮಕ್ಕಳ ಮದುವೆ ಮಾಡಬೇಕೆಂಬ ತತ್ವವೂ ಕೂಡ ರಕ್ತ ಸಂಬಂಧದ ಮಹತ್ವವನ್ನು ತೋರಿಸುತ್ತದೆ. ಮಾನವನ ಹಕ್ಕುಗಳು ಸ್ಥಾನಮಾನಗಳು ಮತ್ತು ಕರ್ತವ್ಯಗಳು ರಕ್ತ ಸಂಬಂಧದಿಂದ ನಿರ್ಧರಿಸಲ್ಪಡುತ್ತದೆ. ಹುಟ್ಟು, ಸಾವು ಮತ್ತು ಬದುಕು, ಈ ಮೂರರಲ್ಲಿಯೂ ರಕ್ತ ಸಂಬಂಧದ ಭಾವನೆಗಳು ಪ್ರಧಾನವಾಗಿರುತ್ತವೆ. ಮಕ್ಕಳ ನಾಮಕರಣದಲ್ಲಿ ಸೋದರತ್ತೆ ತೊಟ್ಟಿಲು ಪೂಜೆ ಮಾಡುವುದು, ಸೋದರಮಾವ ಗುಗ್ಗರಿ ಕಚ್ಚಿ ಮಗುವಿಗೆ ಹೆಸರಿಡುವುದು, ಹೆಣ್ಣು ಮೈನೆರೆತಾಗ ಸೋದರ ಮಾವನು ನೀರನ್ನು ಹಾಕಿ, ಅವಳನ್ನು ಒಳಗೆ ಕರೆತರುತ್ತಾರೆ. ತದನಂತರ ತವರು ಮನೆಯವರು ಉಡುಗೊರೆ ತರುವುದು, ವಿವಾಹದಲ್ಲಿ ಸೋದರಮಾವನಿಗೆ ಪ್ರಥಮ ಆದ್ಯತೆ ಕೊಡುವುದು, ಕುಟುಂಬದಲ್ಲಿ ಯಾರಾದರೂ ಮರಣಹೊಂದಿದಾಗ ನೆಂಟರು ಹೊಸ ಬಟ್ಟೆ ತಂದು ಹಾಕುವುದು, ಶುಭಕಾರ್ಯದಲ್ಲಿ ಮುಖ್ಯಸ್ಥರಿಗೆ ಮಹತ್ವಕೊಡುವುದು, ಹಬ್ಬ ಮತ್ತು ಜಾತ್ರೆಗಳಲ್ಲಿ ಎಲ್ಲರೂ ಒಟ್ಟಿಗೆ ಸೇರುವುದು, ಕಷ್ಟ ಸುಖಗಳಲ್ಲಿ ಭಾಗಿಯಾಗುವುದು ಮೊದಲಾದ ಅಂಶಗಳು ಕೂಡ ಈ ಜನಾಂಗದ ರಕ್ತ ಸಂಬಂಧದ ಮಹತ್ವವನ್ನು ತೋರಿಸುತ್ತದೆ.

ವೈಯಕ್ತಿಕವಾಗಿ ಎಷ್ಟೇ ದ್ವೇಷ ಅಸೂಯೆಗಳಿದ್ದರೂ ಸಾವು ನೋವಿನಲ್ಲಿ ಹತ್ತಿರ ಬರುವ ವ್ಯಕ್ತಿಗಳೆಂದರೆ ರಕ್ತ ಸಂಬಂಧಿಗಳು. ಈ ರಕ್ತ ಸಂಬಂಧದ ಆಧಾರದ ಮೇಲೆಯೇ ಕುಟುಂಬದ ಆಂತರಿಕ ಮತ್ತು ಬಾಹ್ಯ ಸಂಬಂಧಗಳು ಬೆಳೆಯಲು ಸಾಧ್ಯ. ಮಾನವನ ಅಭಿಲಾಷೆಗಳಾದ ಕುಟುಂಬದ ಸ್ಥಾಪನೆಗೆ ಮತ್ತು ವಂಶಾವಳಿಯನ್ನು ಮುಂದುವರಿಸಿಕೊಂಡು ಹೋಗಲು ರಕ್ತ ಸಂಬಂಧವು ಸಹಕಾರಿಯಾಗಿದೆ. ಇತರ ಸಾಮಾಜಿಕ ಸಂಬಂಧಗಳಂತೆ ರಕ್ತ ಸಂಬಂಧವೂ ಕೂಡ ಸಮುದಾಯದಲ್ಲೇ ಸೇರುತ್ತದೆ. ಆದ್ದರಿಂದಲೇ ಈ ಮಾದಿಗ ಸಮುದಾಯದಲ್ಲಿ ರಕ್ತ ಸಂಬಂಧದ ಪಾತ್ರ ಅಪಾರವಾಗಿದೆ.

ಮೂಲತಃ ಒಂದೇ ಸಮುದಾಯವಾದ ಈ ಮಾದಿಗ ಸಮುದಾಯವು ಕಾಲಾಂತರದಲ್ಲಿ ಕಾರಣಾಂತರಗಳಿಂದ ವಿಭಜನೆ ಹೊಂದಿದೆ. ಅಂದರೆ ಇಲ್ಲಿ ಮಾದಿಗರು ಮತ್ತು ಹೊಲೆಯರು ಬೇರೆ ಬೇರೆ ಅಲ್ಲ ಎಂದು ಹೇಳಿದ್ದಾರೆ. ಎರಡು ಜನಾಂಗಗಳು ಒಂದೇ ಎಂದು ತಿಳಿಸಿಕೊಟ್ಟರು.

**೩.೮. ಕುಟುಂಬ ಪದ್ಧತಿ**

ಕುಟುಂಬವು ಒಂದು ಸಾರ್ವತ್ರಿಕವಾದ ಸಂಸ್ಥೆಯಾಗಿದೆ. ಅದು ಅತ್ಯಂತ ಸರಳವಾದ ಹಾಗೂ ಸೂಕ್ಷ್ಮವಾದ ಸಮಾಜವಿದ್ದಂತೆ. ಕುಟುಂಬವಿಲ್ಲದೆ ಸಮಾಜವಿಲ್ಲ. ಅದು ಮಾನವನ ಸಾಮಾಜಿಕ ಜೀವನದ ತಳಹದಿಯಾಗಿದೆ.

ಕುಟುಂಬವು ರಾಜ್ಯಕ್ಕಿಂತಲೂ ಪವಿತ್ರವಾದದ್ದು ಎಂದು ಪೋಪ್ ಫಯಾಸಸ್ ಹೇಳಿದ್ದಾನೆ. ನಮ್ಮ ಸಾಮಾಜಿಕ ಜೀವನಕ್ಕೆ ಒಂದು ನೆಲೆಯನ್ನು ಮತ್ತು ಸ್ಥಿರತೆಯನ್ನು ಕೊಡುವುದು ಆಗಿರುತ್ತದೆ. ಮಾನವನ ವ್ಯಕ್ತಿತ್ವ ಬೆಳೆಸುವ ಮೊದಲ ಸಂಸ್ಥೆ ಎಂದರೆ ಕುಟುಂಬ ಎಂದು ಹೇಳಬಹುದು. ಮಾನವನ ಶಿಶುವಿನಷ್ಟು ಅಸಹಾಯಕ ಜೀವಿ ಬೇರೊಂದಿಲ್ಲ. ಅದನ್ನ ರಕ್ಷಿಸಿ, ಪೋಷಿಸಿ, ಅಭಿವೃದ್ಧಿ ಪಡಿಸುವ ಹಿರಿಯ ಜವಾಬ್ದಾರಿ ಕುಟುಂಬದ ಮೇಲೆ ಬಿದ್ದಿದೆ. ತಾಯಿ ಮಕ್ಕಳ ನಡುವಣ ಜೈವಿಕ ಸಂಬಂಧ, ಕುಟುಂಬ ರಚನೆಗೆ ಪ್ರೇರಣೆ ಎನ್ನಲಾಗಿದೆ. ಮಗುವಿನ ಸಾಮಾಜಿಕರಣ ಕ್ರಿಯೆಯಲ್ಲಿ ತಾಯಿ ಪ್ರಧಾನ ಪಾತ್ರ ವಹಿಸುತ್ತಾಳೆ. ಅಲ್ಲದೆ ತಂದೆ-ತಾಯಿಯರು ತಮ್ಮ ಮಕ್ಕಳಿಗೆ ಅಧಿಕಾರಯುತವಾಗಿಯೂ, ಪ್ರೀತಿ ವಿಶ್ವಾಸಗಳಿಂದಲೂ ಸಾಮಾಜೀಕರಣಕ್ಕೆ ಒಳಪಡಿಸುತ್ತಾರೆ. ಸಾಮಾಜೀಕರಣವು ತಲೆಮಾರಿನಿಂದ ತಲೆಮಾರಿಗೆ ಸಾಗಿ ಬರುವ ಕ್ರಿಯೆಯಾಗಿದೆ. ಹಿರಿಯರನ್ನು ಗೌರವಿಸುವುದು, ರೂಢಿ ಸಂಪ್ರದಾಯ ಬದ್ಧತೆ, ಆಚಾರ-ವಿಚಾರಗಳನ್ನು ಪಾಲಿಸುವುದು, ನೈತಿಕ ನಿಯಮಗಳನ್ನು ಪರಿಚಯ ಮಾಡಿಕೊಳ್ಳುವುದು ಮುಂತಾದ ಕ್ರಿಯೆಗಳನ್ನು ಕುಟುಂಬ ಅತ್ಯಂತ ಸರಳವಾಗಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತದೆ.

ಮಾನವನ ಬಹುಮುಖ್ಯ ಮೂರು ಅವಶ್ಯಕತೆಗಳಾದ ಲೈಂಗಿಕ ತೃಪ್ತಿ, ಸಂತಾನಾಭಿಲಾಷೆ ಮತ್ತು ಆರ್ಥಿಕ ಬಯಕೆಗಳನ್ನು ನಿರ್ದಿಷ್ಟ ರೀತಿಯಲ್ಲಿ ಪೂರೈಸಿಕೊಳ್ಳಲು ಮತ್ತು ನಿಯಂತ್ರಿಸಿಕೊಳ್ಳಲು ಕುಟುಂಬವು ಸಹಾಯ ಮಾಡುತ್ತದೆ. ಕುಟುಂಬ ಚಿಕ್ಕದಾದ ಸಾಮಾಜಿಕ ಘಟಕವಾಗಿದ್ದು ತಂದೆ, ತಾಯಿ, ಮತ್ತು ಮಕ್ಕಳಿಂದ ಕೇಂದ್ರೀಕೃತವಾಗಿರುತ್ತದೆ. ಮಗುವಿನ ಜನನಕ್ಕೆ ಇದು ಪ್ರಥಮ ಸಾಮಾಜಿಕ ಪರಿಸರವಾಗುತ್ತದೆ. ಅನೇಕ ಸಮಾಜಶಾಸ್ತ್ರಜ್ಞರು ಕುಟುಂಬದ ಬಗ್ಗೆ ಅನೇಕ ವ್ಯಾಖ್ಯಾನಗಳನ್ನು ಕೊಟ್ಟಿದ್ದಾರೆ. ಸಮ್ನರ್ ಮತ್ತು ಕಲ್ಲರ್‌ರವರ ಪ್ರಕಾರ, ರಕ್ತ ಸಂಬಂಧಗಳಿಂದ ಕೂಡಿದ ಮತ್ತು ಕನಿಷ್ಟ ಎರಡು ತಲೆಮಾರುಗಳನ್ನು ಒಳಗೊಂಡಿರುವ ಅತೀ ಸೂಕ್ಷ್ಮ ಸಾಮಾಜಿಕ ಸಂಘಟನೆಯೇ ಕುಟುಂಬ ಎಂದಿದ್ದಾರೆ. ಇಲಿಯಟ್‌ರವರ ಪ್ರಕಾರ ಕುಟುಂಬವು ಜೈವಿಕ ಘಟಕವಾಗಿದ್ದು ಗಂಡ, ಹೆಂಡತಿ ಮತ್ತು ಮಕ್ಕಳನ್ನು ಒಳಗೊಂಡಿರುತ್ತದೆ ಎಂದಿದ್ದಾರೆ. ಆದ್ದರಿಂದ ಈ ಕುಟುಂಬವು ಸಮಾಜದ ಮೂಲಭೂತ ಘಟಕವಾಗಿರುತ್ತದೆ. ಮಾನವರೆಲ್ಲರೂ ಕುಟುಂಬ ವರ್ಗಕ್ಕೆ ಸೇರಿದವರಾಗಿರುತ್ತಾರೆ. ಇದು ಜೈವಿಕ ಘಟಕವಾಗಿದ್ದು ಸಂಸ್ಥಾನರೂಪದಲ್ಲಿ ಗಂಡ ಹೆಂಡತಿಯರಲ್ಲಿ ಲೈಂಗಿಕ ಬಾಂಧವ್ಯವನ್ನು ರೂಪಿಸುತ್ತದೆ. ಇದು ವಿಶ್ವವ್ಯಾಪಕತ್ವದ ಗುಮಲಕ್ಷಣಗಳನ್ನು ಹೊಂದಿ ಸಮಾಜದ ಎಲ್ಲಾ ಪ್ರಕಾರಗಳಲ್ಲೂ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತದೆ.

ಮಾದಿಗ ಸಮುದಾಯದಲ್ಲಿ ಪಿತೃಪ್ರಧಾನ ಅವಿಭಕ್ತ ಮತ್ತು ವಿಭಕ್ತ ಕುಟುಂಬಗಳು ಕಂಡು ಬರುತ್ತವೆ. ಕುಟುಂಬದ ಪ್ರತಿಯೊಂದು ಆಗುಹೋಗುಗಳನ್ನು ಹೆಚ್ಚಾಗಿ ಪುರುಷರೇ ನೋಡಿಕೊಳ್ಳುತ್ತಾರೆ. ತಂದೆಯ ನಂತರ ಕುಟುಂಬದ ಹಿರಿಯಮಗ ಮನೆಯ ಯಜಮಾನನಾಗುತ್ತಾನೆ. ಉಳಿದ ಕುಟುಂಬದ ಸದಸ್ಯರೆಲ್ಲರೂ ಈತನಿಗೆ ಅಧೀನರಾಗಿರುತ್ತಾರೆ. ಕುಟುಂಬದ ಸಂಪೂರ್ಣ ಆಡಳಿತ ಈತನ ಮಾರ್ಗದರ್ಶನದಲ್ಲಿಯೇ ಮುಂದುವರೆಯುತ್ತದೆ. ಕುಟುಂಬದ ಮುಖ್ಯಸ್ಥನಿಗೆ 'ಯಜಮಾನ' ಎಂದು ಕರೆಯಲ್ಪಡುವ ಅವನ ಕುಟುಂಬದ ಸಮಸ್ತ ಸದಸ್ಯರ ಯೋಗಕ್ಷೇಮಕ್ಕೆ ಜವಾಬ್ದಾರನಾಗಿರುತ್ತಾನೆ. ಕುಟುಂಬದ ಆಸ್ತಿ ಸಾಮೂಹಿಕವಾಗಿರುತ್ತದೆ. ತಂದೆ-ತಾಯಿ ಮರಣ ಹೊಂದಿದ ಮೇಲೆ ಅಣ್ಣ ತಮ್ಮಗಳಲ್ಲಿ ಹೊಂದಾಣಿಕೆ ಇಲ್ಲದಿದ್ದಾಗ ಆಸ್ತಿಯನ್ನು ಪಾಲುಮಾಡಿಕೊಳ್ಳುತ್ತಾರೆ. ಆದರೆ ಒಡಹುಟ್ಟಿದ ಅಣ್ಣ-ತಮ್ಮಗಳಲ್ಲಿ ಪರಸ್ಪರ ಹೊಂದಾಣಿಕೆಗಳು ಕಂಡುಬರುತ್ತವೆ. ಆದ್ದರಿಂದಲೇ ನನ್ನ ಜೀವನ ಆನಂದದಾಯಕ ಕ್ಷಣಗಳನ್ನು ನಾನು ನನ್ನ ಕುಟುಂಬದ ಮಡಿಲಿನಲ್ಲಿ ಮಾತ್ರ ಕಳೆದಿದ್ದೇನೆ ಎಂದು ಅತ್ಯಂತ ಅಭಿಮಾನದಿಂದ ಹೇಳಿಕೊಂಡಿದ್ದಾನೆ.

ಮಾದಿಗ ಸಮುದಾಯದಲ್ಲಿ ಹತ್ತಿರದ ರಕ್ತ ಸಂಬಂಧಗಳಲ್ಲಿ ವಿವಾಹ ಏರ್ಪಡಿಸುತ್ತಾರೆ. ಏಕಪತ್ನಿತ್ವ ಮತ್ತು ಬಹುಪತ್ನಿತ್ವ ವಿವಾಹ ಪದ್ಧತಿಗಳು ಕಂಡು ಬಂದರೂ ಏಕಪತ್ನಿತ್ವ ಪದ್ಧತಿಗೆ ಹೆಚ್ಚು ಮಹತ್ವ ಕೊಡುತ್ತಾರೆ. ಕನ್ಯಾಶುಲ್ಕ ಅಥವಾ ತೆರ ಕೊಟ್ಟು ಹೆಣ್ಣು ತರುವ ಪದ್ಧತಿಗೆ ಹೆಚ್ಚು ಮಹತ್ವ ಕೊಡುತ್ತಾರೆ. ವರದಕ್ಷಿಣೆ ಪದ್ಧತಿ ಇವರಲಿಲ್ಲ. ಆದರೂ ಕೆಲವು ಪ್ರದೇಶಗಳಲ್ಲಿ ಕಂಡು ಬರುತ್ತದೆ. ವಿವಾಹದ ನಂತರ ಹೆಣ್ಣು ತನ್ನ ಗಂಡನ ಮನೆಯಲ್ಲಿ ವಾಸಿಸುತ್ತಾಳೆ. ಅಂತರ್ಜಾತಿ ವಿವಾಹಕ್ಕೆ ಇವರ ಕುಟುಂಬಗಳಲ್ಲಿ ಅವಕಾಶವಿಲ್ಲ. ವಿಧವಾ ವಿವಾಹ ಅಥವಾ ಕೂಡಿಕೆ ವಿವಾಹ ಪದ್ಧತಿಗಳು ಈ ಜನಾಂಗದಲ್ಲಿ ಕಂಡು ಬರುವುದಿಲ್ಲ. ಬೇರೆ ಬೇರೆ ಕುಲದಿಂದ

ಬಂದಿದ್ದ ಅಣ್ಣತಮ್ಮಂದಿರ ಹೆಂಡತಿಯರು ಅಕ್ಕತಂಗಿಯರಂತ ಇವರ ಕುಟುಂಬಗಳಲ್ಲಿ ಕಾಣಬಹುದು. ಯಾವುದೇ ಕಾರಣಕ್ಕೂ ಮೂರು ಕುಲಗಳಿಂದ ಹೆಣ್ಣು ತರುವುದಾಗಲೀ ಅಥವಾ ಕೊಡುವುದಾಗಲೀ ಮಾಡುವುದಿಲ್ಲ. ಹಿರಿಯ ಸೊಸೆಗೆ ಮೊದಲ ಆದ್ಯತೆ ಕೊಡುತ್ತಾರೆ. ಬಹು ಹಿಂದೆ ಬಾಲ್ಯ ವಿವಾಹ ಹಾಗೂ ಸತಿಸಹಗಮನ ಪದ್ಧತಿ ಅಸ್ತಿತ್ವದಲ್ಲಿತ್ತೆಂದು ತಿಳಿದು ಬರುತ್ತದೆ. ಆದರೆ ಪ್ರಸ್ತುತ ಈ ಅನಿಷ್ಟ ಪದ್ಧತಿಗಳು ಇವರ ಕುಟುಂಬದಲ್ಲಿ ಕಂಡು ಬರುವುದಿಲ್ಲ. ಕೃಷಿ ಪ್ರಧಾನ ಕೇರಿಗಳಲ್ಲಿ ಅವಿಭಕ್ತ ಕುಟುಂಬಗಳು, ಕೂಲಿ ಕಾರ್ಮಿಕರಾಗಿ ದುಡಿಯುವ ಕೇರಿಗಳಲ್ಲಿ ವಿಭಕ್ತ ಕುಟುಂಬಗಳು ಕಂಡು ಬರುತ್ತವೆ. ಪಶುಪಾಲನೆ ಮತ್ತು ವ್ಯವಸಾಯ ವೃತ್ತಿಗಳಲ್ಲಿ ಗಂಡು-ಹೆಣ್ಣು ಎಂಬ ಬೇಧವಿಲ್ಲದೆ ಕೂಡಿ ದುಡಿಯುತ್ತಾರೆ. ಮನೆ ಕೆಲಸ ಹೊಲಗದ್ದೆಗಳಲ್ಲಿ ಗಂಡಿಗಿಂತ ಹೆಣ್ಣು ಹೆಚ್ಚು ಶ್ರಮ ಪಡುತ್ತಾಳೆ. ಕಷ್ಟ ಸುಖಗಳಲ್ಲಿ ಕುಟುಂಬದ ಎಲ್ಲಾ ಸದಸ್ಯರು ಭಾಗಿಯಾಗುತ್ತಾರೆ. ಪರಸ್ಪರ ಒಗ್ಗಟ್ಟು, ರಕ್ಷಣೆ-ಐಕ್ಯತೆ, ನಾವು, ನಮ್ಮವರು ಎಂಬ ಭಾವನೆಗಳು ಪ್ರಧಾನವಾಗಿ ಕಂಡು ಬರುತ್ತವೆ. ರಕ್ತ ಸಂಬಂಧಕ್ಕೆ ವಿಶೇಷ ಮಹತ್ವ ಕೊಡುತ್ತಾರೆ. ಕೆಲವೊಂದು ಪ್ರದೇಶದ ಮಾದಿಗ ಸಮುದಾಯದ ಕುಟುಂಬಗಳಲ್ಲಿ ೨೮ ರಿಂದ ೩೦ ಜನಸಂಖ್ಯೆ ಇರುವ ಅವಿಭಕ್ತ ಕುಟುಂಬಗಳೂ ಹಾಗೆಯೇ ಒಬ್ಬೊಬ್ಬರೇ ವಾಸಿಸುವ 'ಏಕಾತ್ಮಕ ಕುಟುಂಬ' ಮತ್ತು 'ವಿಭಕ್ತ ಕುಟುಂಬಗಳು' ಕಂಡುಬಂದಿವೆ. ಈ ಎರಡು ಕುಟುಂಬಗಳಲ್ಲಿ ಮಕ್ಕಳ ಸಂಖ್ಯೆ ಅಧಿಕವಾಗಿದೆ. ಕೆಲವೊಂದು ಕುಟುಂಬಗಳಲ್ಲಿ ಹದಿನಾಲ್ಕು ಮಕ್ಕಳನ್ನು ಹೆತ್ತ ತಾಯಂದಿರು ಕಂಡು ಬರುತ್ತಾರೆ. ಸಾಕ್ಷರತಾ ಪ್ರಮಾಣ ಅತ್ಯಂತ ಕಡಿಮೆ ಪ್ರಮಾಣದಲ್ಲಿದೆ.

ಈ ಎರಡು ಬುಡಕಟ್ಟು ಸಮುದಾಯಗಳು ಕುಟುಂಬದ ಸದಸ್ಯರಲ್ಲಿ ಶ್ರಮ ವಿಭಜನೆಯು ಲಿಂಗ, ವಯಸ್ಸು ಮತ್ತು ಸದಸ್ಯರ ಅಂತಸ್ತಿಗೆ ತಕ್ಕಂತೆ ಹಂಚಿಕೊಡುತ್ತಾರೆ. ಕಿರಿಯ ಸದಸ್ಯರು ಹಿರಿಯರ ಮಾರ್ಗದರ್ಶನದಂತೆ ನಡೆದುಕೊಳ್ಳುತ್ತಾರೆ. ಪ್ರತಿಯೊಂದು ಕುಟುಂಬಗಳಲ್ಲಿ ಅವರದೇ ಆದಂತಹ ರೂಢಿ ಸಂಪ್ರದಾಯಗಳು, ನಂಬಿಕೆ, ಆಚರಣೆಗಳು, ವಿಧಿ-ವಿಧಾನಗಳು ಕಂಡು ಬರುತ್ತವೆ. ಯಾವುದೇ ಧಾರ್ಮಿಕ ಕಾರ್ಯಗಳಲ್ಲಿ ಪೂಜಾರಿ ಮತ್ತು ದಾಸಯ್ಯಗಳಿಗೆ ವಿಶೇಷ ಮಹತ್ವ ಕೊಡುತ್ತಾರೆ. ಅತ್ಯಂತ ಸರಳ ಜೀವಿಗಳಾದ ಈ ಎರಡು ಸಮುದಾಯಗಳಿಗೆ ದೇವರೆಂದರೆ ಮಹಾ ಪ್ರಾಣ. ದೇವರು ಮತ್ತು ಧರ್ಮದ ವಿಚಾರವಾಗಿ ಕಟ್ಟು ನಿಟ್ಟಾದ ಸಂಪ್ರದಾಯ ಮತ್ತು ನಂಬಿಕೆಗಳು ಕಂಡು ಬರುತ್ತವೆ. ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುತ್ತಾರೆ. 'ಕರಿಗಂಬಳಿಗೆ' ಬಹಳ ಮಹತ್ವ ಕೊಟ್ಟು ಶುಭಕಾರ್ಯದಲ್ಲಿ ಅದನ್ನು ವಿಶೇಷವಾಗಿ ಬಳಸುತ್ತಾರೆ. ಪ್ರತಿಯೊಂದು ಮನೆಯಲ್ಲಿ ಒಂದಾದರೂ 'ಕರಿಕಂಬಳಿ' ಇದ್ದೇ ಇರುತ್ತದೆ. ಮೂಲತಃ ಮಾಂಸಹಾರಿ ಸಮುದಾಯಗಳಾದರೂ ಕೋಳಿ, ಮತ್ತು ದನದ ಮಾಂಸವನ್ನು ತಿನ್ನುತ್ತಿದ್ದರು. ಈ ಸಮುದಾಯದವರು ಈಚಲು ಕಸಬರಿಕೆಯಿಂದ ಕಸಗುಡಿಸುತ್ತಿದ್ದರು. ನಂತರ ಯಾವುದೇ ಚಾಪೆಯಲ್ಲಾದರೂ ಕುಳಿತು ಕೊಳ್ಳುತ್ತಿದ್ದರು. ಆದರೆ ಮೊದಲಿಗೆ ನೆಲದ ಮೇಲೆ ಮಲಗಿ, ನೆಲದಲ್ಲಿಯೇ ಕುಳಿತು ಕೊಂಡು ಮಾತನಾಡುತ್ತಿದ್ದರು.

ಮಾದಿಗ ಸಮುದಾಯಗಳು ಇತ್ತೀಚಿಗೆ ಆರ್ಥಿಕ ಕಾರಣಗಳಿಂದ ಮತ್ತು ಪಾಶ್ಚಾತ್ಯ ನಡೆನುಡಿಗಳ ಅನುಕರಣೆಯಿಂದ ಅವಿಭಕ್ತ ಕುಟುಂಬಗಳು ಒಡೆದು ಹೋಗಿ ವಿಭಕ್ತ ಕುಟುಂಬಗಳಾಗಿ ಪರಿವರ್ತನೆಯಾಗುತ್ತಿವೆ. ಕೈಗಾರಿಕೀಕರಣ ಮತ್ತು ನಗರೀಕರಣಗಳ ಪ್ರಭಾವದಿಂದಾಗಿ ಕೇರಿಯ ಕುಟುಂಬಗಳ ಜನಸಂಖ್ಯೆ ಕಡಿಮೆಯಾಗುತ್ತಿದೆ. ಬೇಟೆ, ಪಶುಪಾಲನೆ, ಕೃಷಿ ಕ್ಷೇತ್ರದಲ್ಲಿ ಆಸಕ್ತಿ ಕಡಿಮೆಯಾಗುತ್ತಿದೆ. ನಗರ ಪ್ರದೇಶದ ಮಾರುಕಟ್ಟೆಯಿಂದ ಹಾಲು, ತರಕಾರಿ, ಮಾಂಸ, ದವಸ ಧಾನ್ಯ ಮೊದಲಾದ ಸಾಮಾನುಗಳನ್ನು ತಂದು ಕೇರಿಯಲ್ಲಿ ತಿನ್ನುತ್ತಾರೆ. ಸಂಪರ್ಕ ಸಮೂಹ ಮಾಧ್ಯಮಗಳ ಪ್ರಭಾವದಿಂದ ಕರಿಕಂಬಳಿ ಹೋಗಿ ಉಲ್ಲನ್‌ರಗ್ಗು, ಪಂಚೆ, ಶಾಲು, ಗಡಿಯಾರ, ಪ್ಯಾಂಟು, ಷರಟು, ಚೂಡಿದಾರ ಮತ್ತು ನೈಟಿಗಳು ಕೇರಿಗೆ ಬಂದವು. ಹೀಗೆ ನಾಗರಿಕ ಜನರ ಸಂಪರ್ಕದಿಂದ ಮೂಲ ಬುಡಕಟ್ಟು ಸಂಸ್ಕೃತಿ ಮತ್ತು ಸ್ಮೃತಿಗಳು ಮಾದಿಗರ ಸಮುದಾಯದಲ್ಲಿ ಕಣ್ಮರೆಯಾಗುತ್ತಿವೆ.

**೩.೯ ವಿಧಿ ನಿಷೇಧ**

ಮಾನವನ ನಡತೆಯನ್ನು ರೂಪಿಸಲು, ನಿಯಂತ್ರಿಸಲು ಸಮಾಜವು ಸ್ಥಾಪಿಸಿರುವ ಕಟ್ಟುಪಾಡುಗಳೇ ವಿಧಿ ನಿಷೇಧಗಳು. ಇವು ಯಾವ ಸಂದರ್ಭದಲ್ಲಿ ಮನುಷ್ಯ ಏನು ಮಾಡಬೇಕು ಮತ್ತು ಏನು ಮಾಡಬಾರದು

ಎಂಬುದನ್ನು ಸ್ಪಷ್ಟವಾಗಿ ತಿಳಿಸುತ್ತವೆ. ಈ ವಿಧಿ ನಿಷೇಧ ಎನ್ನುವ ಕಲ್ಪನೆಯನ್ನು ಇಂದು ಬಹಳ ವಿಶಾಲವಾದ ಅರ್ಥದಲ್ಲಿ ಬಳಸಲಾಗುತ್ತಿದೆ. ಅದನ್ನೇ ಇಂದು ಲೋಕ ರೂಢಿಗಳು, ಸಂಪ್ರದಾಯಗಳು, ಸಂಸ್ಕಾರಗಳು, ನಂಬಿಕೆಗಳು, ಆಚರಣೆಗಳು, ಕಾನೂನು ನಿರ್ಬಂಧಗಳು, ಸಮಾರಂಭಗಳು, ಪದ್ಧತಿಗಳು, ಶೋಭಾಚಾರಗಳು ಮತ್ತು ಲಿಖಿತ ಶಾಸನಗಳು ಮೊದಲಾದ ಎಲ್ಲಾ ಬಗೆಯ ಸಾಮಾಜಿಕ ನಿಯಮಗಳನ್ನು ಒಳಗೊಂಡಿರುವಂತೆ ವಿಧಿ ನಿಷೇಧಗಳಲ್ಲಿ ಬಳಸಲಾಗುತ್ತಿದೆ. ಇವು ಸಾಮಾಜಿಕ ನಡೆತೆಯ ನೀಲಿ ನಕಾಶೆಗಳಾಗಿ ಸಮಾಜದ ಸದಸ್ಯರುಗಳ ನಿರೀಕ್ಷಿತ ನಡತೆ ಹೇಗಿರಬೇಕು ಎಂಬುದರ ಜೊತೆಗೆ ಆದರ್ಶ ನಡತೆಯ ಬಗ್ಗೆಯೂ ಅವು ತಿಳಿಯಪಡಿಸುತ್ತವೆ. ಮಾನವ ನಿರ್ಮಿತ ಸಂಘ ಸಂಸ್ಥೆಗಳಿಗೆ, ಪಕ್ಷ ಪಂಗಡಗಳಿಗೆ, ರಾಜ್ಯ ಸರ್ಕಾರಗಳಿಗೆ, ಸಮಾಜ ಸಮುದಾಯಗಳಿಗೆ ಆಧಾರ ಸ್ತಂಭಗಳಾಗಿ ವಿಧಿ ನಿಷೇಧಗಳು ಕೆಲಸ ಮಾಡುತ್ತವೆ. ಸಾಮಾಜಿಕ ಅಂಶಗಳಾದ ಲೈಂಗಿಕತೆ, ವಿವಾಹ, ಜನನ, ಋತುಮತಿ, ಹೆರಿಗೆ, ಆಹಾರ, ಮರಣ, ವೇಷಭೂಷಣ, ದೇವರು, ಜಾತ್ರೆ, ಹಬ್ಬ, ನಾಮಕರಣ, ವೃತ್ತಿ, ವಸತಿ, ನ್ಯಾಯ, ಕುಟುಂಬ ಮೊದಲಾದ ಸಂಪ್ರದಾಯ ಮತ್ತು ನಂಬಿಕೆಗಳನ್ನು ಆಚರಣೆಗೆ ತರುವ ಮಾನವನ ಸ್ವೇಚ್ಛಾಚಾರದ ಮೇಲೆ ಕಡಿವಾಣ ಹಾಕುವುದರ ಮೂಲಕ ಸಮೂಹದ ಅಸ್ತಿತ್ವಕ್ಕೆ ವಿಧಿ ನಿಷೇಧಗಳು ಸಹಕಾರಿಯಾಗಿವೆ. ಈ ವಿಧಿ ನಿಷೇಧಗಳು ಮಾನವನ ಸಾಮಾಜಿಕ ವ್ಯವಸ್ಥೆಗೆ ಭದ್ರತೆಯನ್ನು ಮತ್ತು ಸ್ಥಿರತೆಯನ್ನು ನೀಡುವುದರಿಂದ ಈ ಮಾದಿಗ ಸಮುದಾಯದ ಸಾಮಾಜಿಕ ಜೀವನ ಮತ್ತು ಧಾರ್ಮಿಕ ಆಚರಣೆಗಳಲ್ಲಿ ವಿಧಿ ನಿಷೇಧಗಳಿಗೆ ಹೆಚ್ಚು ಮಹತ್ವ ಕೊಟ್ಟು ಅವುಗಳಿಗೆ ಬದ್ಧರಾಗಿ ನಡೆದುಕೊಳ್ಳುತ್ತಾರೆ. ಹುಟ್ಟಿನಿಂದ ಸಾವಿನವರೆಗೂ ಹಲವು ಬಗೆಯ ಕಟ್ಟುನಿಟ್ಟಾದ ವಿಧಿ ನಿಷೇಧಗಳು ಈ ಸಮುದಾಯದಲ್ಲಿ ಕಂಡು ಬರುವುದರಿಂದ ವಿಧಿಗಳು ಮತ್ತು ನಿಷೇಧಗಳು ಎಂದು ಎರಡು ರೀತಿಯಾಗಿ ವಿಭಾಗ ಮಾಡಲಾಗಿದೆ.

### ವಿಧಿಗಳು

ವಿಧಿ ಎಂದರೆ ಮಾಡಲೇಬೇಕಾದ ಆಜ್ಞೆ, ಅಥವಾ ಅನುಸರಿಸಲೇ ಬೇಕಾದ ಮಾರ್ಗ. ಈ ವಿಧಿ ಎಂಬ ಶಬ್ದಕ್ಕೆ ನಿಯಮ ಆಜ್ಞೆ ಅದೃಷ್ಟ, ಲಿಖಿತ, ಹಣೆಬರಹ, ಎಂಬ ಅರ್ಥವಿದ್ದರೂ ಇಲ್ಲಿ ನಿಯಮಗಳು ಎಂಬ ಅರ್ಥದಲ್ಲಿ ಅಧ್ಯಯನಿಸಬೇಕಾಗಿದೆ. ಈ ವಿಧಿ ನಿಯಮಗಳನ್ನು ನಿಶ್ಚಯಾತ್ಮಕ ನೈತಿಕ ನಿಯಮಗಳು ಎಂಬುದಾಗಿಯೂ ಕರೆಯಬಹುದು. ಇವು ನಮ್ಮ ನಡತೆ ಹೀಗೆಯೇ ಇರಬೇಕೆಂದೂ, ನಾವು ಹೀಗೆಯೇ ಮಾಡಬೇಕೆಂದೂ, ನಿಗಧಿಪಡಿಸುತ್ತವೆ. ಈ ವಿಧಿಗಳು ಮಾನವನ ಸಾಮಾಜಿಕ ಬದುಕಿಗೆ ದಾರಿ ದೀಪಗಳಾಗುವುದರಿಂದ ಸಮಾಜ ಮತ್ತು ಸಮೂಹ ಒಪ್ಪಿತ ನಿರೀಕ್ಷೆಗಳೇ ಆಗಿವೆ. ಒಂದು ಸಮುದಾಯದ ಕಡ್ಡಾಯ ಆಚರಣೆಗಳು ವಿಧಿಗಳಾಗಿ ಪರಿವರ್ತನೆಯಾಗುವುದರಿಂದ, ಮಾದಿಗ ಸಮುದಾಯದ ಸಮೂಹಗಳಲ್ಲಿ ಆ ಜನಾಂಗಕ್ಕೆ ಸಂಬಂಧಪಟ್ಟ ಕಟ್ಟು ನಿಟ್ಟಾದ ವಿಧಿ ನಿಯಮಗಳನ್ನು ಪಾಲಿಸುವುದು ಕಂಡು ಬರುತ್ತದೆ.

ಮಾದಿಗ ಸಮುದಾಯದಲ್ಲಿ ಸತ್ತ ಮಾತಾಪಿತೃಗಳ ದಿನಕರ್ಮಗಳನ್ನು ಮಾಡಬೇಕು. ಮನೆದೇವರ ವಾರದ ದಿನ ನೆಲ ಸಾರಿಸಬೇಕು. ನಂತರ ಮೈನೆರೆತ ಹೆಣ್ಣಿಗೆ ಸೋದರಮಾವನೇ ಸ್ನಾನವನ್ನು ಮಾಡಿಸಿ ಒಳಗೆ ಕರೆದುಕೊಳ್ಳುತ್ತಾರೆ. ಧಾರೆ ಮುಹೂರ್ತಕ್ಕೆ ವಧುವನ್ನು ಸೋದರಮಾವನೇ ಕರೆದು ತರಬೇಕು. ನಾಮಕರಣದಲ್ಲಿ ಮಗುವಿನ ಸೋದರತ್ತೆ ತೊಟ್ಟಿಲು ಪೂಜೆ ಮಾಡುತ್ತಾಳೆ. ಗುಡಿ ಕಟ್ಟೆ ಮತ್ತು ಕಟ್ಟೆಮನೆಗಳ ನ್ಯಾಯ ತೀರ್ಮಾನಕ್ಕೆ ಬದ್ಧರಾಗಬೇಕು. ನಂತರ ಮಾರಿ ಹಬ್ಬ ಬಂದ ಮೇಲೆ ಅದರ ಮುಂದೆ ದೀಪದ ಎಣ್ಣೆಯನ್ನು ಇಡಬೇಕು. ನಂತರ ಹಬ್ಬ ಹರಿದಿನಗಳಲ್ಲಿ ಜಾತ್ರೆ ಉತ್ಸವಗಳಲ್ಲಿ ನೆಂಟರನ್ನು ಕರೆಯಬೇಕು. ನಂತರ ಆ ದೇವರನ್ನು ('ಜಲ್ದಿಗೆ'?) ತೆಗೆದುಕೊಂಡು ಹೋಗಬೇಕು. ಹಾಗೂ ಜಾತ್ರೆಯ ಸಂದರ್ಭದಲ್ಲಿ ಜನರು ಅಂದರೆ ಯಜಮಾನರು ಪೇಟವನ್ನು ಸುತ್ತಬೇಕು. ಹಿರಿಯರಿಗೆ ಗೌರವ ಕೊಡಬೇಕು. ಇವೇ ಮೊದಲಾದ ಅಸಂಖ್ಯಾತ ವಿಧಿಗಳು ಮಾದಿಗ ಸಮುದಾಯಗಳಲ್ಲಿ ಕಂಡು ಬರುವುದರ ಜೊತೆಗೆ ಅವರ ಸಾಮಾಜಿಕ ಜೀವನದಲ್ಲ ಅನೌಪಚಾರಿಕ ನಿಯಮಗಳಾಗಿ ಕಾರ್ಯ ನಿರ್ವಹಿಸುತ್ತಿವೆ.

### ನಿಷೇಧಗಳು

ನಿಷೇಧ ಎಂದರೆ ಇಂಥದನ್ನು ಮಾಡಕೂಡದು ಅಥವಾ ಇದನ್ನು ಬಹಿಷ್ಕರಿಸು ಎಂದರ್ಥ. ಈ ನಿಷೇಧ ಎಂಬ ಶಬ್ದಕ್ಕೆ ವಿರೋಧ, ಬಿಡುಗಡೆ, ಬಹಿಷ್ಕಾರ, ಪ್ರತಿಭಟನೆ, ಅಡ್ಡಿ, ಸಲ್ಲದು ಎಂಬ ಅರ್ಥಗಳಿದ್ದರೂ ಇಲ್ಲಿ

ಬಹಿಷ್ಕಾರಾಜ್ಞೆ ಎಂಬ ಅರ್ಥದಲ್ಲಿ ಅಧ್ಯಯನ ಮಾಡಬೇಕಾಗಿದೆ. ಈ ನಿಷೇಧಗಳನ್ನು ನಿಷೇಧಾತ್ಮಕ ನೈತಿಕ ನಿಯಮಗಳು ಎಂಬುದಾಗಿಯೂ ಕರೆಯುತ್ತಾರೆ. ಇವು ನಾವು ಹೇಗೆ ನಡೆದುಕೊಳ್ಳಬಾರದೆಂದು ತಿಳಿಸುತ್ತದೆ. ನಮ್ಮ ಕೆಲವೊಂದು ನಡತೆಯ ರೀತಿಯನ್ನು ಇವು ಬಹಿಷ್ಕರಿಸುತ್ತವೆ. ಆದ್ದರಿಂದ ಇವುಗಳನ್ನು ಬಹಿಷ್ಕರಾಜ್ಞೆ ಎಂಬುದಾಗಿಯೂ ಕರೆಯಬಹುದು. ಸಮಾಜ ಮತ್ತು ಸಮುದಾಯಗಳು ತಿರಸ್ಕರಿಸಲ್ಪಟ್ಟ ಸಾಮಾಜಿಕ ನಿಯಮಗಳೇ ನಿಷೇಧಗಳಾಗಿರುತ್ತವೆ. ಕೇರಿ, ಗ್ರಾಮ, ದೇವರು, ಧರ್ಮ, ಕುಲ ಮತ್ತು ಬೆಡಗುಗಳಿಗೆ ವಿರೋಧವಾಗಿರುವ ಯಾವುದೇ ಆಚರಣೆಗಳಿದ್ದರೂ ಮಾದಿಗ ಸಮುದಾಯದ ಸಮೂಹಗಳು ಮತ್ತು ಹೊಲೆಯ ಸಮುದಾಯಗಳು ಬಹಿಷ್ಕರಿಸುವುದರಿಂದ ಈ ಎರಡು ಸಮುದಾಯಗಳಿಗೆ ಸಂಬಂಧಿಸಿದ ಹಲವಾರು ನಿಷೇಧಗಳನ್ನು ಈ ಜನಾಂಗಗಳಲ್ಲಿ ಕಾಣಬಹುದು.

ನಂತರ ಈ ಸಮುದಾಯದಲ್ಲಿ ಗಂಡ ಏನಾದರೂ ಸತ್ತರೆ ಅವಳು ವಿಧವೆ ಆಗುತ್ತಾಳೆ. ಆದರೆ ಮರುವಿವಾಹ ಆಗುವಂತಿಲ್ಲ. ಏಕೆಂದರೆ ಈ ಸಮುದಾಯದಲ್ಲಿ ಆ ಮಹಿಳೆಯನ್ನು ಕೀಳು ಭಾವನೆಯಿಂದ ನೋಡುತ್ತಾರೆ ಎಂಬ ಒಂದೇ ಒಂದು ಕಾರಣಕ್ಕಾಗಿ ಗಂಡನ ಚಿತೆಯಲ್ಲಿಯೇ ಹೆಂಡತಿ ಸಹ ಹಲವು ಶತಮಾಗಳ ಹಿಂದೆ ಚಿತೆ ಏರುತ್ತಿದ್ದಳು. ಆದರೆ ಈ ಪದ್ಧತಿ ಈಗಿಲ್ಲ. ಯಜಮಾನ ಅಥವಾ ಯಜಮಾನಿ ಸತ್ತರೆ ದಿನದ ಕರ್ಮಗಳನ್ನು ಹಿರಿಯ ಮಗನು ಮಾಡಬೇಕಾಗುತ್ತದೆ. ಹಾಗೂ ಕೆಲವೊಂದು ಹಬ್ಬಗಳಲ್ಲಿ ಅಂದರೆ ನಾಗಪ್ಪನ ಹಬ್ಬದಲ್ಲಿ ಗೌಲಿಪಾಯಸ ಮಾಡಬಾರದು. ದೈವದವರ ಮುಂದೆ ಸುಳ್ಳು ಹೇಳಬಾರದು. ಸೂತಕದ ಮನೆಯಲ್ಲಿ ಊಟಮಾಡಬಾರದು. ಜಾಡಿ ಕಂಬಳಿಯ ಮೇಲೆ ಕುಳಿತುಕೊಳ್ಳಬಾರದು. ನಂತರ ರಾಶಿ ಕಣದಲ್ಲಿ ಚಪ್ಪಲಿ ಹಾಕಬಾರದು. ಧೂಳು-ಸಂಜೆ ಹೊತ್ತಿನಲ್ಲಿ ಮಲಗಬಾರದು ಎಂಬುದಾಗಿ ನಿಷೇಧವಿರುವುದು ತಿಳಿದು ಬರುತ್ತದೆ. ಮೈನೆರೆತಾಗ ಮಂಗಳ ಕಾರ್ಯ ಮಾಡಬೇಕು. ಹೀಗೆ ಹಲವಾರು ಆಜ್ಞೆಗಳನ್ನು ಈ ಸಮುದಾಯದಲ್ಲಿ ಕಾಣಬಹುದಾಗಿದೆ. ಮಾದಿಗ ಮತ್ತು ಹೊಲೆಯ ಸಮುದಾಯಗಳಲ್ಲಿ ಇಂತಹ ಹಲವಾರು ನಂಬಿಕೆಗಳು, ಆಚರಣೆಗಳು, ವಿಧಿನಿಷೇಧಗಳನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ.

### ೩.೧೦ ಶಿಕ್ಷಣ

ಮಾದಿಗ ಸಮುದಾಯದಲ್ಲಿ ಬಹಳಷ್ಟು ಜನರು ಅನಕ್ಷರಸ್ಥರಾಗಿರುತ್ತಾರೆ. ಕಾರಣ ಅವರ ತಂದೆ-ತಾಯಿಗಳು ಮಕ್ಕಳನ್ನು ಶಾಲೆಗೆ ಕಳಿಸುತ್ತಿರಲಿಲ್ಲ. ಏಕೆಂದರೆ ಅವರಲ್ಲಿ ಬಡತನ ಎನ್ನುವಂತದ್ದು ತಾಂಡವಾಡುತ್ತಿತ್ತು. ಹಾಗಾಗಿ ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸಲು ನಿರಾಕರಿಸಿದರು. ಇದರಿಂದ ವಿದ್ಯಾಭ್ಯಾಸ ಕುಂಠಿತಗೊಂಡಿತು. ತದನಂತರ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸುವುದರ ಬದಲು ಅವರು ತಮ್ಮ ಊರ ಗೌಡನ ಮನೆಯಲ್ಲಿ ಜೀತದಾಳಾಗಿ ದುಡಿಯಬೇಕಾಗುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ವಿದ್ಯಾಭ್ಯಾಸ ಮೇಲ್ಮಟ್ಟಕ್ಕೆ ಹೋಗಿದೆ ಎಂದು ತಿಳಿದು ಬರುತ್ತದೆ. ಆದ್ದರಿಂದ ಸರ್ಕಾರವು ತನ್ನ ಒಂದು ಗುರಿಯನ್ನು ಇಟ್ಟುಕೊಂಡು ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡಿಕೊಂಡು ಬರುತ್ತದೆ. ಹಾಗೂ ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಮುಂದುವರೆಸಿಕೊಂಡು ಬಂದಿದೆ ಎಂದು ಹೇಳಬಹುದು. ಹಾಗೂ ಶೈಕ್ಷಣಿಕ ವ್ಯವಸ್ಥೆಯಲ್ಲಿ ಮೂಡಿ ಬರುವಂತಹ ಎಲ್ಲಾ ತರಹದ ಅಕ್ಷರಗಳನ್ನು ಕಲಿಸಿಕೊಡಲು ಸಹಾಯಕವಾಯಿತು. ನಂತರ ಬರುಬರುತ್ತಾ ಮಾದಿಗ ಸಮುದಾಯವು ಸಹ ಅನಕ್ಷರಸ್ಥರಿಂದ ಅಕ್ಷರಸ್ಥರಾಗಿ ಮಾರ್ಪಡತೊಡಗಿದೆ.

### ೩.೧೧. ಮಾದಿಗ ಬೆಡಗುಗಳು

ಬೇರೆ ಬೇರೆ ಜಾತಿಯ ಗುಂಪಿನವರಲ್ಲಿ ಕುಲಗೋತ್ರಬೆಡಗುಗಳು ಕಂಡುಬರುವಂತೆ ಮಾದಿಗರಲ್ಲಿಯೂ ಸಹ ಕಂಡುಬರುತ್ತವೆ. ಸಾಮಾನ್ಯವಾಗಿ ಈ ಕುಲಗೋತ್ರಗಳು ಮತ್ತು ಬೆಡಗುಗಳು ಸಮುದಾಯವೊಂದರ ಅಂತರ್‌ಸಂಬಧಗಳಿಗೆ ಅತ್ಯಾವಶ್ಯಕವಾಗಿ ಬೇಕಾಗುತ್ತವೆ. ಅಂದರೆ ಸಂಬಂಧವನ್ನು ಬೆಳಸಿಕೊಳ್ಳುವಾಗ ಹಾಗೂ ಮದುವೆಯ ಸಂದರ್ಭದಲ್ಲಿ ಈ ಕುಲಗೋತ್ರಗಳು ಬಹಳ ಮುಖ್ಯ ಪಾತ್ರವಹಿಸುತ್ತವೆ. ಒಂದೇ ಬೆಡಗಿನವರು ಮಧ್ಯ ಹೆಣ್ಣನ್ನು ಕೊಡುವ ತೆಗೆದುಕೊಳ್ಳುವ ಕಾರ್ಯ ಮಾಡುವುದಿಲ್ಲ. ಏಕೆಂದರೆ ಅವರು ಅಣ್ಣತಮ್ಮಂದಿರಾಗುತ್ತಾರೆ. ಇದರಿಂದಾಗಿ ತಮಗೆ ಸಮಾನವಾದ ಬೇರೆ ಕುಲದವರೊಂದಿಗೆ ಸಂಬಂಧವನ್ನು

ಹೆಚ್ಚಾಗಿ ಬೆಳೆಸುತ್ತಾರೆ. ಇಂತಹ ಪದ್ಧತಿ ಮಾದಿಗ ಸಮುದಾಯದಲ್ಲಿ ಮಾತ್ರವಲ್ಲದೆ ಎಲ್ಲ ಬುಡಕಟ್ಟು ಮೂಲದ ಸಮುದಾಯಗಳಲ್ಲೂ ಕಂಡು ಬರುತ್ತದೆ.'

ಇಲ್ಲಿ ಅಂದರೆ ಮಾದಿಗರಲ್ಲಿ ಹಲವಾರು ಕುಲಗೋತ್ರ ಮತ್ತು ಬೆಡಗುಗಳನ್ನು ಕಾಣುತ್ತೇವೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

೧. ಐವಳ್ಳಿ
೨. ಭಂಡಾರಿ
೩. ಭಿಮಿಲರು ಇರುವೆ
೪. ಎನಮಲೋರು
೫. ಮೀನಿಂಗಲಾರು
೬. ಮಚ್ಚೇಲರು
೭. ಭೂಮಲೋರು
೮. ಕುರಿಯರು
೯. ಎಗ್‌ಡೇರು
೧೦. ಮೋಚಿಗರು
೧೧. ಆಸೆಲಾರು
೧೨. ಸೆಡುಪೋತಲರು
೧೩. ಜವೆದಾರ
೧೪. ಚತ್ರೇರು

ಇವಲ್ಲದೆ ಮಾದಿಗರಲ್ಲಿ ಇನ್ನು ಕೆಲವು ಬೆಡಗುಗಳು ಕಂಡುಬರುತ್ತವೆ. ಮುಂಡ್ಲಾರು, ಸಾಕೆಪಳ್ಳು, ಮಂಗಾಣಿಕೆ, ಆನೆಯವರು, ಆಲದವರು, ಮಾಳಿಗೆಯವರು ಮುಂತಾದವುಗಳು ಕಂಡು ಬರುತ್ತವೆ. ಈ ಬೆಡಗುಗಳನ್ನು ಸೂಕ್ಷ್ಮವಾಗಿ ನೋಡಿದಾಗ ಇವು ಪ್ರಾಣಿ ಪಕ್ಷಿ ಗಿಡಗಳ ಸಂಕೇತಗಳನ್ನು ಹೊಂದಿರುವುದು ನಮಗೆ ತಿಳಿದು ಬರುತ್ತದೆ. ಮಾದಿಗರಲ್ಲಿ ಕೆಲವು ಅವರವರ ಹೆಸರುಗಳನ್ನು ಇಟ್ಟುಕೊಳ್ಳುತ್ತಿದ್ದರು. ಉದಾಹರಣೆಗೆ, ಹರಳಯ್ಯನ ಕುಲದವರು, ಚನ್ನಯ್ಯನ ಕುಲದವರು, ಕರಡಿ ಗುಂಪಿನವರು, ಕಟ್ಟೆಪ್ಪನ ಗುಂಪಿನವರು ಇತ್ಯಾದಿ.

**ಒಳಪಂಗಡಗಳು**

ಒಳಪಂಗಡಗಳು ಎಂದ ಕೂಡಲೇ ನಮಗೆ ನೆನಪಾಗುವುದು ಅವರು ಮಾಡುವಂತಹ ವೃತ್ತಿಗಳು. ಆದರೆ ಮಾದಿಗರಲ್ಲಿಯೂ ಕೂಡ ಇತರೆ ಜಾತಿಗಳಿಗಿರುವಂತೆಯೇ ಅನೇಕ ಒಳಪಂಗಡಗಳು ಕಂಡು ಬರುತ್ತವೆ. ಈ ಪಂಗಡಗಳು ಬಹುಶಃ ಅವರು ಆಡುವಂತಹ ಭಾಷೆ, ಮಾಡುತ್ತಿರುವ ವೃತ್ತಿ, ಬದುಕುತ್ತಿರುವ ರೀತಿ-ನೀತಿ, ಮತ್ತು ನಡವಳಿಕೆಯ ಮೇಲೆ ರಚನೆಯಾಗಿರುತ್ತದೆ. ಮಾದಿಗರಲ್ಲಿ ಬಹುತೇಕರು ಕನ್ನಡವನ್ನೇ ಹೆಚ್ಚಾಗಿ ಮಾತನಾಡುತ್ತಾರೆ. ಆದರೆ ಇತ್ತೀಚಿಗೆ ಕನ್ನಡ ಮತ್ತು ತೆಲುಗು ಮಿಶ್ರಿತ ಭಾಷೆಯನ್ನು ಮಾತನಾಡುವುದನ್ನು ರೂಢಿಸಿಕೊಂಡಿದ್ದಾರೆ. ಬಹುಶಃ ಇದು ತೆಲುಗು ಮಾತೃಭಾಷೆಯನ್ನಾಗುಳ್ಳ ಇತರೆ ಸಮುದಾಯಗಳೊಂದಿಗಿನ ಒಡನಾಟ, ಸಂಪರ್ಕಗಳಿಂದ ಬಂದಿರಬಹುದು. ಆದ್ದರಿಂದ ಮಾದಿಗರು ಮಾತನಾಡುತ್ತಿರುವಂತಹ ಭಾಷೆಯನ್ನಾಧರಿಸಿ ಕೆಲವು ಒಳಪಂಗಡಗಳನ್ನು ಎರಡು ಭಾಗವಾಗಿ ವಿಂಗಡಿಸಬಹುದು. ಅದರಲ್ಲಿ ಮುಖ್ಯವಾಗಿ ಕನ್ನಡ ಮಾತನಾಡುವವರದು ಕನ್ನಡ ಮಾದಿಗ ಎಂದೂ, ತೆಲುಗು ಮಾತನಾಡುವ ಮಾದಿಗರನ್ನು ತೆಲುಗು ಮಾದಿಗರು ಎಂದು ಎರಡು ಭಾಗವಾಗಿ ವಿಂಗಡಿಸಬಹುದಾಗಿದೆ.

**ವೃತ್ತಿ**

ಮಾದಿಗ ಎಂದ ಕೂಡಲೇ ನಮಗೆ ನೆನಪಿಗೆ ಬರುವುದು ಚಪ್ಪಲಿ ಒಲೆಯುವ ವೃತ್ತಿ. ಮಾದಿಗರು ಬೇರೆ ಬೇರೆ ವೃತ್ತಿಗಳನ್ನೂ ಮಾಡುತ್ತಾರೆ. ಚರ್ಮವನ್ನು ಹದಗೊಳಿಸುವುದು, ಇತರ ಸಮುದಾಯಗಳಲ್ಲಿ ಯಾರಾದರೂ ಸತ್ತಾಗ ಸಾವಿನ ಸುದ್ದಿಯನ್ನು ತಲುಪಿಸುವ ಕಾರ್ಯವನ್ನು ಮಾಡುತ್ತಿದ್ದರು. ಥಾಕರೆ ಮಾಡುವುದು ಮುಂತಾಗಿ. ಪ್ರಸ್ತುತ ಜೀವನಾಧಾರಕ್ಕಾಗಿ ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸುತ್ತಿದ್ದಾರೆ.

ವರ್ಣವ್ಯವಸ್ಥೆಯಲ್ಲಿ ಮಾದಿಗರನ್ನು ಕೆಳಸ್ತರದ ಸಮುದಾಯವೆಂಬುದಾಗಿ ಗುರುತಿಸಲಾಗಿದೆ. ಈ ಸಮುದಾಯದಲ್ಲಿಯೂ ಸಣ್ಣ ಮಾದಿಗರು ಮತ್ತು ದೊಡ್ಡ ಮಾದಿಗರು ಎಂಬ ಏಣಿ ಶ್ರೇಣಿಯ ವ್ಯವಸ್ಥೆಯೂ

ಇದೆ. ಮೊಲಕಾಲ್ಮೂರು ತಾಲ್ಲೂಕಿನ ನೇರ್ಲಹಳ್ಳಿ ಗ್ರಾಮದಲ್ಲಿ ಕೆಲವು ಹೆಸರುಗಳನ್ನು ಇಟ್ಟುಕೊಂಡಿದ್ದಾರೆ. ಅವುಗಳೆಂದರೆ ಮನಿಂದ್ಲರು, ಗುಡಿಂದ್ಲರು, ದೊಡ್ಡಮನೆಯವರು ಇತ್ಯಾದಿ.

ಒಟ್ಟಾರೆಯಾಗಿ ಮಾದಿಗರಲ್ಲಿ ಬರುವಂತಹ ಪಂಗಡ ಅಥವಾ ಗುಂಪುಗಳನ್ನು ಅನೇಕ ಭಾಗಗಳಾಗಿ ವಿಂಗಡಿಸಬಹುದು. ಮಾದಿಗರು ಚಪ್ಪಲಿಯನ್ನು ಒಲೆಯುವಾಗ ಜನರು ನೇರವಾಗಿ ಅವನನ್ನು ಮಾದಿಗ ಎಂದು ಗುರುತಿಸುತ್ತಾರೆ. ನಂತರ ಬೂಟು ಪಾಲೀಸು ಮಾಡುವವನ್ನು ಸಹ ಮಾದಿಗನೆಂದು ಕರೆಯಲಾಗುತ್ತದೆ. ಏಕೆಂದರೆ ಅವನ ಕೈಯಲ್ಲಿ ದನದ ಚರ್ಮ ಇರುವುದರಿಂದ ಜನರು ಅವನನ್ನು ಮಾದಿಗ ಎಂದು ಪರಿಗಣಿಸುತ್ತಾರೆ ಎಂದು ಹೇಳಬಹುದಾಗಿದೆ.

ಮೊಳಕಾಲ್ಮೂರು ಪರಿಸರದ
ಮಾದಿಗ ಸಮುದಾಯದ ಆಚರಣೆಗಳು

ಅಧ್ಯಾಯ ನಾಲ್ಕು

# ಮಾದಿಗ ಸಮುದಾಯದ ಆಚರಣೆಗಳು

**೪.೧. ಜೀವನಾವರ್ತನ ಆಚರಣೆಗಳು**

೪.೧.೧ ಹೆರಿಗೆ ಶಾಸ್ತ್ರ

೪.೧.೨. ಜನನ

೪.೧.೩. ನಾಮಕರಣ

೪.೧.೪. ಬಾಣಂತಿಯ ದೈವ ದರ್ಶನ

೪.೧.೫. ಋತುಮತಿ ಶಾಸ್ತ್ರ

೪.೧.೬. ಮದುವೆ

೪.೧.೭. ಶವಸಂಸ್ಕಾರ

**೪.೨. ವಾರ್ಷಿಕಾವರ್ತನ ಆಚರಣೆಗಳು**

೪.೨.೧. ಸಂಕ್ರಾಂತಿ

೪.೨.೨. ನಾಗರ ಪಂಚಮಿ

೪.೨.೩. ಯುಗಾದಿ

೪.೨.೪. ಶಿವರಾತ್ರಿ

೪.೨.೫. ದೀಪಾವಳಿ

೪.೨.೬. ಕಣಿಮೆ ದುರ್ಗಮ್ಮನ ಜಾತ್ರೆ

೪.೨.೭. ಗೌರಸಮುದ್ರದ ಮಾರೆಮ್ಮನ ಜಾತ್ರೆ

ಸಮಾಜವನ್ನು ಒಂದುಗೂಡಿಸುವ ಶಕ್ತಿಯನ್ನು ಸಂಪ್ರದಾಯ ಮತ್ತು ಆಚರಣೆಗಳು ಮಾಡುತ್ತವೆ. ಆಚರಣೆ ಎಂದರೆ ಯಾವುದೇ ಒಂದು ನಿರ್ದಿಷ್ಟ ಸ್ಥಳದಲ್ಲೇ ನಿರ್ದಿಷ್ಟ ಕಾಲದಲ್ಲಿ ನಡೆಯುವ ಕ್ರಿಯೆಯಾಗಿದೆ. ಇದು ಕೇವಲ ಒಬ್ಬ ವ್ಯಕ್ತಿಯಿಂದ ಸೃಷ್ಟಿಯಾದುದ್ದಲ್ಲ. ಅದು ಯಾವುದೇ ಒಂದು ಜನಾಂಗದ ಜೀವನ ವಿಧಾನ, ಬೇಡಿಕೆಯ ಅಂಗವಾಗಿ ಹುಟ್ಟಿಕೊಂಡ ಸಮುದಾಯ ಆಗಿದೆ. ಇದು ಮನುಷ್ಯನ ಜೀವನದ ಅವಿಭಾಜ್ಯ ಅಂಗಗಳಾಗಿ ಅವನ ಬದುಕನ್ನು ರೂಪಿಸುವ ಸಂಸ್ಕೃತಿಯನ್ನು ಪೋಷಣೆ ಮಾಡುತ್ತವೆ.

ಯಾವುದೇ ಒಂದು ಆಚರಣೆಗೆ ನಂಬಿಕೆಯೇ ಬೆನ್ನೆಲುಬು ಆಗಿದೆ. ಮನುಷ್ಯರಿಗೆ ದೇವರು ಪ್ರಕೃತಿಯ ಮೇಲಿನ ಭಯದಿಂದಾಗಿ ಅವುಗಳ ಮೇಲಿನ ಭಕ್ತಿ ಮನೋಭಾವವನ್ನು ಬೆಳೆಸಿಕೊಳ್ಳುತ್ತಾರೆ. ಈ ದೇವರ ಮೇಲಿನ ನಂಬಿಕೆಯೇ ಮನುಷ್ಯರನ್ನು ಆಚರಣೆ ಮಾಡಲು ತೊಡಗಿಸುತ್ತದೆ. ಆಚರಣೆಗಳನ್ನು ಮಾಡಿಕೊಂಡು ಬರುವುದರಿಂದ ನಮಗೆ ಬಂದ ಕಷ್ಟವೂ ಪರಿಹಾರವಾಗುವುದು, ಮಾನಸಿಕ ನೆಮ್ಮದಿಯೂ ದೊರೆಯುವುದು ಎನ್ನುವ ನಂಬಿಕೆ ಜನರಲ್ಲಿದೆ. ಅಂದರೆ ನಂಬಿಕೆಯಿಂದಲೇ ಆಚರಣೆಗಳು ಇರುವುದರಿಂದಲೇ ಸಂಪ್ರದಾಯಗಳು ಜೀವಂತವಾಗಿವೆ. ಭೌಗೋಳಿಕ, ಜನಾಂಗಿಕ ಮತ್ತು ಸಾಂಸ್ಕೃತಿಕ ವಾತಾವರಣದ ಹಿನ್ನೆಲೆಯಲ್ಲಿ ಇಂದಿಗೂ ಆಚರಣೆಗಳು ಹುಟ್ಟಿಕೊಂಡು ಬಂದಿವೆ ಎಂದು ಹೇಳಬಹುದು. ಆದರೆ ಭೌಗೋಳಿಕ ಪ್ರದೇಶಕ್ಕೆ ತಕ್ಕಂತೆ, ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನೇ ಪಡೆಯುತ್ತೇವೆಯೇ ಹೊರೆತು ಯಾವುದೇ ಆಚರಣೆಯಾಗಲೀ ನಶಿಸಿ ಹೋಗುವುದಿಲ್ಲ. ನಂತರ ಆಂತರಿಕ ಮತ್ತು ಬಾಹ್ಯ ಪ್ರೇರಣೆಗಳು ಒಂದು ಜನಾಂಗದ ಆಹಾರ ಪದ್ಧತಿ, ವೇಷಭೂಷಣಗಳನ್ನು ಬಹಳ ಮಟ್ಟಿಗೆ ಬದಲಾವಣೆಗೆ ಅವಕಾಶ ಮಾಡಿಕೊಡಬಹುದೇ ಹೊರೆತು ಆ ಜನಾಂಗದ ಹುಟ್ಟು, ಸಾವು, ವಿವಾಹಕ್ಕೆ ಸಂಬಂಧಿಸಿದ ವಿಧಿವಿಧಾನಗಳನ್ನಲ್ಲ. ಇವು ಬದುಕಿನ ಬಹುಮುಖ್ಯ ತಿರುವುಗಳಾಗಿರುವುದರಿಂದ ಸಣ್ಣ ಲೋಪವೂ ಕೂಡ ಆಗದಂತೆ ನೋಡಿಕೊಳ್ಳುತ್ತಾರೆ. ಆದ್ದರಿಂದಲೇ ಒಂದು ಜನಾಂಗದ ಸಂಸ್ಕೃತಿಯ ಮೂಲ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಆ ಜನಾಂಗದ ಹುಟ್ಟು, ಸಾವು, ಮದುವೆಗೆ ಸಂಬಂಧಿಸಿದ ಆಚರಣೆಗಳು ಹೆಚ್ಚು ಪ್ರಯೋಜನಕಾರಿಯಾಗಿವೆ. ಈ ನಿಟ್ಟಿನಲ್ಲಿ ನಗರೀಕರಣದ ಹಿನ್ನೆಲೆಯಲ್ಲಿ ಮಾದಿಗರ ಆಚರಣೆಗಳು ಆ ಸಂಸ್ಕೃತಿಯ ಮೂಲಾಂಶಗಳನ್ನು ಉಳಿಸಿಕೊಂಡಿರಬಹುದಾದ ಸಾಧ್ಯತೆಯನ್ನು ಹುಡುಕುವ ಶೋಧಿಸುವ ಅಗತ್ಯ ಇದೆ. ಆದ್ದರಿಂದ ಆಚರಣೆಗಳಲ್ಲಿ ಜೀವನಾವರ್ತನ ಆಚರಣೆಗಳು ಮತ್ತು ವಾರ್ಷಿಕಾವರ್ತನ ಆಚರಣೆಗಳು ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು.

**ಮಾದಿಗ ಪದ ನಿಷ್ಪತ್ತಿ**

ಸಮಾಜದ ಅತ್ಯಂತ ಕೆಳಸ್ತರದಲ್ಲಿರುವ ದಲಿತ ಜನಪದ ವೃಂದಗಳಲ್ಲಿ ಮಾದಿಗರು ಒಬ್ಬರು. ಉತ್ತರ ಕರ್ನಾಟಕಾದ್ಯಂತ ಸಾಮಾನ್ಯವಾಗಿ ಮಾದಿಗರು ಎಂಬ ಒಂದೇ ಹೆಸರಿನಿಂದ ಕರೆಯುತ್ತಿದ್ದರೂ ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯುವುದು ಕಂಡು ಬರುತ್ತದೆ.

'ಮಾದಿಗ' ಎಂಬುದು 'ಮಾದ' ಮತ್ತು 'ಇಗ' ಎಂಬ ಪ್ರತ್ಯಯದೊಂದಿಗೆ ರೂಪಿತವಾಗಿದೆ. 'ಮಾದ' ಎಂಬ ಕನ್ನಡ ಪದದ ಅರ್ಥ ಅಸ್ಪೃಶ್ಯ, ಹರಿಜನ ಎಂದು ಕರೆಯುತ್ತಾರೆ. ಇದಕ್ಕೆ 'ಇಗ' ಪ್ರತ್ಯಯ ಸೇರಿದಾಗ ಮಾದಿಗ ಎಂದಾಗುತ್ತದೆ. ಇವರನ್ನು 'ಮಾದಾರ', 'ಮಾದರ', 'ಮಾತಂಗ', 'ಮಾಂಗ', ಮತ್ತು 'ಎಡಗೈ'ಯವರೆಂದು ಸಹ ಕರೆಯಲಾಗುತ್ತದೆ. ಈ ಪದವನ್ನು ನಾವು ಮುಖ್ಯವಾಗಿ ಜಾತಿ ಸೂಚಕ, ವೃತ್ತಿ ಸೂಚಕ ಮುಂತಾದ ಅರ್ಥಗಳಲ್ಲಿ ಕಾಣಬಹುದು. ಅಂದರೆ ಇಲ್ಲಿ 'ಕೊಲ್ಲುವವನೇ ಮಾದಿಗ, ಹೊಲಸು

ತಿನ್ನುವವನೇ ಹೊಲೆಯ' ಎನ್ನಲಾಗಿದೆ. ಒಂದು ಜೀವಿಯನ್ನು ಕೊಲ್ಲುವವರೆಲ್ಲರೂ ಮಾದಿಗರು ಎಂಬ ಅರ್ಥದಲ್ಲಿ ಬಳಕೆಯಾಗಿದೆ. ನಂತರ ಉತ್ತರ ಕರ್ನಾಟಕದಲ್ಲಿ ಮಾದಿಗರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುವ ಪದ್ಧತಿ ಕಂಡು ಬರುತ್ತದೆ. ಅವುಗಳೆಂದರೆ ಬಿಜಾಪುರ, ಬೆಳಗಾಂ, ಧಾರವಾಡ, ರಾಯಚೂರು ಮತ್ತು ಗುಲ್ಬರ್ಗಾ. ಬಹುಪಾಲು ಭಾಗಗಳಲ್ಲಿ ಮಾದಿಗರು ಎಂದು ಕರೆದರು. ನಂತರ ಸರ್ಕಾರವು ಪರಿಶಿಷ್ಟ ಜಾತಿಗಳನ್ನು ವಿಂಗಡಿಸುವಾಗ ಆದಿದ್ರಾವಿಡ, ಆದಿಕರ್ನಾಟಕ ಎಂದೂ ಹೆಸರಿಸಲಾಯಿತು.

### ಮಾದಿಗರ ಮೂಲ

ಮಾದಿಗರು ತಾವು ಆದಿಜಾಂಬವರು, ಜಾಂಬವಂತ ಕುಲದವರು, ಜಾಂಬವ ಪಟ್ಟಣದವರೆಂದು ಹೇಳುತ್ತಾರೆ. ಚನ್ನಯ್ಯಗಳಿರುವುದು ಅಂದರೆ ಹೊಲೆಯರಿರುವುದು ಚನ್ನಪಟ್ಟಣ, ಜಾಂಬವರಿರುವುದು ಜಾಂಬವ ಪಟ್ಟಣ ಎನ್ನುತ್ತಾರೆ. ಈ ಜಾಂಬವ ರಾಮಾಯಣದ ಜಾಂಬವಂತನೆಂದು ಹೇಳಲಾಗುತ್ತದೆ. ಒಂದು ಶಾಪದಿಂದ ತಾವು ಈ ಸ್ಥಿತಿಗೆ ಬಂದಿರುವುದಾಗಿ ಮೂಲದ ಬಗ್ಗೆ ಒಂದು ಕಥೆ ಹೇಳಲಾಗಿದೆ.

> "ಜಾಂಬವ ಕುಲದ ಹುಡುಗನೊಬ್ಬನಿಗೆ ಕಾಮಧೇನುವಿನ ಹಾಲು ಕುಡಿಯಬೇಕೆಂಬ ಆಸೆಯಾಯಿತು. ದೇವತೆಗಳು ಕುಡಿ ಎನ್ನುವಾಗ ಜಾಂಬವ ಅವನನ್ನು ತಡೆದನು. ಆದರೂ ಆ ಹುಡುಗ ಹಾಲನ್ನು ಕುಡಿದೇ ಬಿಟ್ಟನು. ಆನಂತರ ಹಾಲೇ ಇಷ್ಟು ರುಚಿಯಾಗಿರುವಾಗ ಕಾಮಧೇನುವಿನ ಮಾಂಸ ಎಷ್ಟು ರುಚಿಯಾಗಿರಬೇಕೆಂದು ತಿಳಿದು ಅದನ್ನು ಕೊಂದು ಮಾಂಸವನ್ನು ನಾಲ್ಕು ಭಾಗ ಮಾಡಿದನು. ದೇವತೆಗಳು ತಾವು ಮೂರು ಭಾಗ ತೆಗೆದುಕೊಂಡು ಜಾಂಬವ ಹುಡುಗನಿಗೆ ಒಂದು ಭಾಗ ಕೊಟ್ಟರು. ಈ ಸಂಗತಿ ಶಿವನಿಗೆ ತಿಳಿಯಲು ಕಾಮಧೇನುವನ್ನು ಮತ್ತೆ ಪಡೆಯಲು ನಿಶ್ಚಯಿಸಿ ದೇವತೆಗಳು ತಮ್ಮ ಭಾಗವನ್ನೆಲ್ಲಾ ಮರಳಿ ಮತ್ತೆ ಕೊಟ್ಟರು. ಈ ಹುಡುಗ ಅಷ್ಟರಲ್ಲಿ ಅದನ್ನು ಬೆಂಕಿಯಲ್ಲಿ ಸುಟ್ಟುಬಿಟ್ಟಿದ್ದ. ಅದನ್ನಾದರೂ ಕೊಡು ಎಂದರೂ ಕೊಡಲೊಪ್ಪಲಿಲ್ಲ. ಆ ಭಾಗವನ್ನು ಬಿಟ್ಟು ಕಾಮಧೇನುವಿಗೆ ಜೀವದಾನ ಮಾಡಿದರು. ಅದರ ಗಲ್ಲದ ಭಾಗ ಮಾತ್ರ ಕಪ್ಪಾಗಿ ಗಾಯವಾಯಿತು. ದೇವ ದೇವತೆಗಳಿಂದ ಮೊಂಡತನ ಮಾಡಿದ್ದರಿಂದ ಶಾಪಗ್ರಸ್ತನಾಗಿ ಕೀಳು ಕುಲದವನಾದನು. ಅವಾಗಿನಿಂದಲೇ ಅವನು ಮಾದಿಗನಾದನು"

ಎಂದು ಈ ಪುರಾಣ ಮೂಲದ ಕಥೆ ಹೇಳುತ್ತದೆ.

– ಮಾದಿಗರ ಮೂಲದ ಬಗೆಗಿರುವ ಮತ್ತೊಂದು ಕಥೆ ಹೀಗಿದೆ,

> "ಜಾಂಬವ ಋಷಿ ಈಶ್ವರನ ಸಭೆಗೆ ಪ್ರತಿ ದಿನವೂ ತಡವಾಗಿ ಬರುತ್ತಿದ್ದನು. ಏಕೆ ಎಂದು ಶಿವನು ಕೇಳಿದಾಗ ತನ್ನ ಮಕ್ಕಳ ಬೇಡಿಕೆಗಳನ್ನು ಪೂರೈಸಿ ಬರುವುದರಿಂದ ತಡವಾಗುತ್ತದೆ ಎಂದನು. ಶಿವನು ಜಾಂಬವ ಮಕ್ಕಳ ಮೇಲೆ ಕರುಣೆ ತೋರಿ ಬೇಡಿದ್ದನ್ನು ಕೊಡುವ ಕಾಮಧೇನುವನ್ನು ಅವನಿಗೆ ಕೊಟ್ಟನು. ಒಂದು ದಿನ ಜಾಂಬವನು ಮನೆಯಲ್ಲಿ ಇಲ್ಲದಿರುವಾಗ ಸಾಂಖ್ಯ ಮುನಿ ಅವನ ಮನೆಗೆ ಬಂದನು. ಜಾಂಬವನ ಮಗ ಯುಗ ಮುನಿ ಅತ್ಯಂತ ಆದರದಿಂದ ಸ್ವಾಗತಿಸಿಕೊಂಡು ಸತ್ಕರಿಸಿ ಊಟಮಾಡಿಸಿದನು. ಊಟಮಾಡುವಾಗ ಹಾಲಿನ ಕೆನೆ ರುಚಿಯೆನಿಸಿ ಸಾಂಖ್ಯನು ಕಾಮಧೇನುವನ್ನು ಕೊಂದು ಮಾಂಸವನ್ನು ತಿನ್ನುವುದಾಗಿ ಯುಗ ಮುನಿಗೆ ಕೇಳಿದನು. ಆದರೆ ಆತ ಅದಕ್ಕೆ ಒಪ್ಪಲಿಲ್ಲ. ಬೇಡವೆಂದರೂ ಕೇಳದೆ ಸಾಂಖ್ಯ ಹಸುವನ್ನು ಕೊಂದು ಎಲ್ಲರಿಗೂ ತಿನ್ನುವಂತೆ ಹೇಳಿದನು. ಈಶ್ವರನ ಸಭೆಯಿಂದ ಜಾಂಬವ ಮುನಿ ಬಂದಾಗ ಎಲ್ಲರೂ ಮಾಂಸವನ್ನು ತಿನ್ನುವುದನ್ನು ನೋಡಿದನು. ಸಾಂಖ್ಯ ಮತ್ತು ಯುಗ ಮುನಿಗಳನ್ನು ನ್ಯಾಯ ನಿರ್ಣಯಕ್ಕಾಗಿ ಶಿವನ ಸಭೆಗೆ ಕರೆದೊಯ್ದನು. ಸಭೆಯ ಒಳಗೆ ಪ್ರವೇಶಿಸದೆ

ಇಬ್ಬರೂ ಬಾಗಿಲಲ್ಲೇ ನಿಂತರು. ಶಿವನು ಕೋಪದಿಂದ ನೀವೀರ್ವರೂ 'ಚಾಂಡಲ'ರಾಗಿರೆಂದು ಶಾಪ ಕೊಟ್ಟನು. ಸಾಂಖ್ಯನು ಬಾಗಿಲ ಬಲಗಡೆ ನಿಂತಿದ್ದರಿಂದ ಅವನ ವಂಶಜರು ಬಲಗೈಯವರು ಅಂದರೆ ಹೊಲೆಯರಾದರು. ಯುಗ ಮುನಿ ಎಡಗಡೆ ಬಾಗಿಲಿಗೆ ನಿಂತಿದ್ದರಿಂದ ಅವನ ಕುಲದವರು ಎಡಗೆಯವರು ಅಂದರೆ ಮಾದಿಗರಾದರು. ಆ ಶಾಪ ವಿಮೋಚನೆಗಾಗಿ ಜನರಿಗೆ ಚಪ್ಪಲಿ ಹೊಲೆಯುತ್ತೇವೆಂದು ಹೇಳುತ್ತಾರೆ."

ಮಾದಿಗರ ಮೂಲವನ್ನು ಪ್ರಾಚೀನತೆಯನ್ನು ಕಂಡುಕೊಳ್ಳಲು ಶಾಸನಗಳು ಮತ್ತು ಸಾಹಿತ್ಯ ಕೃತಿಗಳು ಆಕರ ಸಾಮಾಗ್ರಿಗಳನ್ನೊದಗಿಸುತ್ತದೆ. ಕೆಳವರ್ಗದ ಜನಾಂಗಗಳನ್ನು ಕುರಿತು ಶಾಸನ ಹಾಗು ಸಾಹಿತ್ಯ ಕೃತಿಗಳು, ವಿದೇಶಿಯರ ಬರಹಗಳು ಹೆಚ್ಚಿನ ಮಟ್ಟಿಗೆ ಮೌನವನ್ನೇ ತಾಳುತ್ತವೆಯೆಂದರೂ ಅಲ್ಲಲ್ಲಿ ಕೆಲವು ನಿದರ್ಶನಗಳು ಸಿಕ್ಕುತ್ತವೆ. ಕ್ರಿ.ಶ. ನಾಲ್ಕನೇ ಶತಮಾನದಲ್ಲಿ ಭಾರತಕ್ಕೆ ಬಂದ ಫಾಯಿಯಾನನು ಅಂದು ಭಾರತದಲ್ಲಿ ಏಳು ಜಾತಿಗಳಿದ್ದವೆಂದು ಹೇಳುತ್ತಾನೆ. ಚಾಂಡಾಲರು ಪಟ್ಟಣದಲ್ಲಿ ಪ್ರವೇಶಿಸಬೇಕಾದರೆ ಕೋಲಿನಿಂದ ತಮ್ಮ ಬರುವಿಕೆಯನ್ನು ಸೂಚಿಸಬೇಕೆಂಬ ನಿಯಮವಿತ್ತು ಎನ್ನುತ್ತಾನೆ. ಹನ್ನೆರಡನೆಯ ಶತಮಾನದಲ್ಲಿ ಸಂಬೋಳಿ ನಾಗಿದೇವ ಹಿಡಿದ ಕೋಲು ಇದೇ ಆಗಿರಬೇಕು. ಸಾಹಿತ್ಯ ಕೃತಿಗಳಲ್ಲಿಯೂ ಅಲ್ಲಲ್ಲಿ ಮಾದಿಗರನ್ನು ಕುರಿತು ಉಲ್ಲೇಖವಾಗಿರುವುದನ್ನು ಕಾಣಬಹುದು. ವಡ್ಡಾರಾಧನೆಯ ಸುಕುಮಾರನ ಕಥೆಯಲ್ಲಿ ವಾಯುಭೂತಿ ತಾನು ಮಾಡಿದ ಪಾಪ ಕರ್ಮದ ಫಲವಾಗಿ ಅನೇಕ ಜನ್ಮಗಳನ್ನು ಕಳೆಯುತ್ತಾನೆ. ಹೀಗೆ ಹಲವಾರು ಶಾಸನಗಳು ಈ ಮಾದಿಗ ಸಮುದಾಯದ ಮೂಲವನ್ನು ತಿಳಿಸುತ್ತದೆ.

ಒಟ್ಟಿನಲ್ಲಿ ಮಾದಿಗ ಜನಾಂಗವು ಬಹಳ ಪ್ರಾಚೀನಕಾಲದಿಂದಲೂ ಇತ್ತೆಂಬುದಕ್ಕೆ ಮಹಾಕಾವ್ಯ ಸಾಹಿತ್ಯಕೃತಿ, ಶಾಸನಗಳು ತಕ್ಕಮಟ್ಟಿಗಾದರೂ ಆಧಾರಗಳನ್ನು ಒದಗಿಸುತ್ತವೆ. ಇಂದು ಮಾತಂಗ, ಮಾದಿಗ, ಜಾಂಬವ ಎಂದು ಯಾವುದೇ ಹೆಸರಿನಿಂದ ತಮ್ಮನ್ನು ಇವರನ್ನು ಕರೆದುಕೊಂಡರೂ ಮೂಲ ಒಂದೇ ಜನಾಂಗವಾಗಿದ್ದು ಅವರಲ್ಲಿಯೇ ಮುಂದೆ ವೃತ್ತಿ ಇರುವಿಕೆಗೆ ಅನುಗುಣವಾಗಿ ಅನೇಕ ಪಂಗಡಗಳಾಗಿ ನಿಂತವು.

### ೪.೧. ಜೀವನಾವರ್ತನ ಆಚರಣೆಗಳು

ಎಲ್ಲಾ ಸಮುದಾಯಗಳಂತೆ ಮಾದಿಗ ಸಮುದಾಯಕ್ಕೂ ಸಹ ಅನೇಕ ಆಚರಣೆಗಳಿವೆ. ಅವುಗಳನ್ನು ಜೀವನಾವರ್ತನ ಆಚರಣೆಗಳು ಮತ್ತು ವಾರ್ಷಿಕಾವರ್ತನ ಆಚರಣೆಗಳು ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಅಂದರೆ ಜೀವನಾವರ್ತನ ಆಚರಣೆಗಳಲ್ಲಿ ಅವಶ್ಯಕವಾದ ವಿಧಿವಿಧಾನಗಳಿಂದ ನಿಶ್ಚಿತ ಸಾಮಾಜಿಕ ಕಟ್ಟುಪಾಡುಗಳಿಂದ ಜಾತಿಯೊಂದು ರೂಢಿಸಿಕೊಂಡು ಬಂದ ನಿಯಮಗಳ ಮೂಲಕ ಆಚರಿಸುತ್ತೇವೆ. ಆದರೆ ವಾರ್ಷಿಕಾವರ್ತನ ಆಚರಣೆಗಳು ಹೆಚ್ಚಾಗಿ ಸಮೂಹ ನಿಷ್ಠವಾದವುಗಳು. ಅಂದರೆ ವರ್ಷಕ್ಕೆ ಒಂದು ಬಾರಿ ಆಚರಣೆ ಮಾಡುವುದನ್ನು ವಾರ್ಷಿಕಾವರ್ತನ ಆಚರಣೆಗಳು ಎಂದು ಕರೆಯಬಹುದು.

#### ೪.೧.೧ ಹೆರಿಗೆ ಶಾಸ್ತ್ರ

ಮಾದಿಗರು ಮೊದಲು ಹೆರಿಗೆಯನ್ನು ಸೂತಕವೆಂದು ಭಾವಿಸಿದ್ದರು. ಈ ಕಾರಣದಿಂದ ಮಾದಿಗರಲ್ಲಿ ಹೆರಿಗೆಯ ಸಂದರ್ಭದಲ್ಲಿ ಮನೆಯಲ್ಲಿಯೇ ಒಂದು ಕಡೆ ಅವಳನ್ನು ಮಲಗಿಸಿ ಬಾಣಂತಿಯನ್ನು ನೋಡಿಕೊಳ್ಳಲು ಒಬ್ಬ ಹೆಣ್ಣುಮಗಳು ಇರುತ್ತಿದ್ದಳು. ನಂತರ ದಿನಗಳು ಬೀಳುತ್ತಿದ್ದಂತೆಯೇ ಗಂಡನ ಮನೆಯಿಂದ ತವರು ಮನೆಗೆ ಕರೆತರುತ್ತಾರೆ. ಯಾವುದೇ ಜನಾಂಗವನ್ನು ತೆಗೆದುಕೊಂಡಾಗ ಹೆರಿಗೆ ಸಂದರ್ಭದಲ್ಲಿ ಸೂಲಗಿತ್ತಿಯರು ಅವರನ್ನು ನೋಡಿಕೊಳ್ಳುತ್ತಿದ್ದರು ಎಂದು ಹೇಳಬಹುದು. ಗರ್ಭಿಣಿಗೆ ಒಂಭತ್ತು ತಿಂಗಲು ತುಂಬಿ ಹೆರಿಗೆ ಬೇನೆ ಪ್ರಾರಂಭವಾದರೆ ಸಾಕು ಸೂಲಗಿತ್ತಿಯರು ಬಂದು ಅಲ್ಲಿ ಕುಳಿತುಕೊಳ್ಳುತ್ತಾರೆ. ಏನಾದರೂ ಹೆರಿಗೆ ಆಗದೇ ಇದ್ದಾಗ ಸ್ಥಳೀಯ ನಾಟಿ ವೈದ್ಯರೋ ಇಲ್ಲವೇ ಆರ್.ಎಂ.ಪಿ. ವೈದ್ಯರಿಂದಲೋ ಚಿಕಿತ್ಸೆ ಕೊಡಿಸುತ್ತಿದ್ದರು. ಹಿಂದೆ ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತಿರಲಿಲ್ಲ. ತಮ್ಮ ಮನೆಯಲ್ಲಿಯೇ ಇರುವ ಸೂಲಗಿತ್ತಿಯರಿಂದ ಬಾಣಂತಿತನವನ್ನು ಮಾಡಿಸುತ್ತಿದ್ದರು. ಗರ್ಭಿಣಿ ಹೆಣ್ಣುಮಗಳು ಜನನ ನೀಡುವ ಮುಂಚಿತವಾಗಿ ಅಥವಾ ಹೆರಿಗೆ ನೋವು ಕಾಣಿಸುವ ಸಂದರ್ಭದಲ್ಲಿ ಹೆರಿಗೆಗೆ ಬೇಕಾಗುವ ವಸ್ತುಗಳನ್ನೆಲ್ಲಾ ಕೂಡಿಸಿಕೊಳ್ಳುತ್ತಿದ್ದರು. ಮತ್ತು

ಬಾಣಂತಿಗೆ ಬೇಕಾದಂತಹ ವಸ್ತುಗಳನ್ನು ತಯಾರು ಮಾಡಿಕೊಳ್ಳುತ್ತಿದ್ದರು. ಇಂದು ಬಾಣಂತಿತನಕ್ಕೆ ಬೇಕಾದಂತಹ ವಸ್ತುಗಳು ಹಿಂದೆ ಸಿಗುತ್ತಿದ್ದಿಲ್ಲ. ಆದರೆ ಮನೆಯಲ್ಲಿಯೇ ಸಿಗುವಂತಹ ವಸ್ತುಗಳಾದ ಹಳೆ ಬಟ್ಟೆಗಳನ್ನು ಇಟ್ಟುಕೊಂಡು ಹೆರಿಗೆಯನ್ನು ಮಾಡುತ್ತಿದ್ದರು. ಮಗುವಿನ ಜನನದ ನಂತರ ಹೊಕ್ಕಳು ಬಳ್ಳಿಯನ್ನು ಕೊಯ್ಯಲು ಬ್ಲೇಡು ಅಥವಾ ಚಾಕನ್ನು ಉಪಯೋಗಿಸುತ್ತಿದ್ದರು. ಆದರೆ ಇಂದು ಕೆಲವರು ಆಧುನಿಕ ವೈದ್ಯಕೀಯ ಸೌಲಭ್ಯಗಳಿಂದಾಗಿ ಗರ್ಭಿಣಿ ಸ್ತ್ರೀಯನ್ನು ಆಸ್ಪತ್ರೆಗಳಿಗೆ ಸೇರಿಸಿ ಹೆರಿಗೆಯನ್ನು ಮಾಡಿಸುತ್ತಾರೆ ಎಂದು ಹೇಳಬಹುದು.

ನಂತರ ಒಂಭತ್ತು ತುಂಬಿದ ಗರ್ಭಿಣಿಗೆ ಮನೆಯ ಯಜಮಾನರು ಅವಳ ಮೇಲೆ ಅನೇಕ ಕಟ್ಟುಪಾಡುಗಳನ್ನು ವಿಧಿಸುತ್ತಾರೆ. ಮಾದಿಗ ಸಮುದಾಯದಲ್ಲಿ ಜನನ ಸಂದರ್ಭದಲ್ಲಿ ಹಲವಾರು ಆಚರಣೆಗಳನ್ನು ಆಚರಿಸುತ್ತಾರೆ. ಅಮವಾಸ್ಯೆ ಮತ್ತು ಹುಣ್ಣಿಮೆ ದಿನಗಳು ಬಂದಾಗ ಹೊರಗಡೆ ಬಿಡದೇ ಮನೆಯ ಒಳಗಡೆ ಇರಲು ಸೂಚಿಸುತ್ತಾರೆ. ಅಲ್ಲದೆ ಭಾರದ ಕೆಲಸಗಳನ್ನು ಅವಳಿಂದ ಮಾಡಿಸುವುದಿಲ್ಲ. ಆದಾಗ್ಯೂ ಈ ಸಮುದಾಯದಲ್ಲಿ ಗರ್ಭಿಣಿ ಸ್ತ್ರೀಯರು ಯಾವುದೇ ಆತಂಕವಿಲ್ಲದೆ ದೈನಂದಿನ ಕೆಲಸಗಳನ್ನು ಮಾಡುತ್ತಾರೆ. ಹೆರಿಗೆ ನೋವು ಕಾಣಿಸಿಕೊಂಡ ತಕ್ಷಣ ಮನೆಯಲ್ಲಿಯೇ ಸೂಲಗಿತ್ತಿಯರು ಹೆರಿಗೆಯನ್ನು ಮಾಡಿಸುತ್ತಿದ್ದರು. ನಂತರ ಗರ್ಭಿಣಿ ಜೊತೆಯಲ್ಲಿ ಒಬ್ಬ ಸೂಲಗಿತ್ತಿ ಮಾತ್ರ ಮೂರು ದಿನಗಳ ಕಾಲ ಇರಿಸುತ್ತಿದ್ದರು. ಹೆರಿಗೆಯಾದ ನಂತರ ಸೂಲಗಿತ್ತಿಯರು ಸ್ನಾನ ಮಾಡಿ ಬೇರೆ ಸೀರೆ ಕುಪ್ಪಸವನ್ನು ತೊಟ್ಟುಕೊಂಡು ತಮ್ಮ ತಮ್ಮ ಮನೆಗಳಿಗೆ ಹೊರಡುತ್ತಿದ್ದರು.

ಇಂದು ಮಾದಿಗರಲ್ಲಿಯೂ ಸಹ ನಾಗರೀಕತೆಯ ಪ್ರಭಾವದಿಂದ ಇತರೆ ಸಮುದಾಯಗಳ ಜೊತೆಯಲ್ಲಿ ನೆಲಸಿ ಜೀವನ ನಡೆಸುವುದರಿಂದ ಹಟ್ಟಿಗಳ ಪ್ರಮಾಣ ಕಡಿಮೆಯಾಗಿದೆ. ಗರ್ಭಿಣಿ ಹೆಣ್ಣುಮಗಳನ್ನು ಮನೆಯ ಒಳಗಡೆ ಒಂದು ಕೋಣೆಯಲ್ಲಿ ಸೂಲಗಿತ್ತಿ ಮನೆಯ ಹಿರಿಯ ವಯೋವೃದ್ಧೆಯ ಮೂಲಕ ಹೆರಿಗೆಯನ್ನು ಮಾಡಿಸುತ್ತಾರೆ. ಆದರೆ ಊರಿನ ಅಕ್ಕ ಪಕ್ಕದಲ್ಲಿ ಆಸ್ಪತ್ರೆಗಳಿದ್ದರೆ ಆ ಆಸ್ಪತ್ರೆಗೆ ಹೋಗಿ ಹೆರಿಗೆ ಮಾಡಿಸಿಕೊಂಡು ಬರುತ್ತಾರೆ.

೪.೧.೨. ಜನನ

ಮಾದಿಗ ಸಮುದಾಯದಲ್ಲಿ ಮಗು ಹುಟ್ಟಿದ ಸಂದರ್ಭದಲ್ಲಿ ಆಚರಿಸುವ ಸಂಪ್ರದಾಯಗಳು, ನಂಬಿಕೆಗಳು ತುಂಬಾ ಕಟ್ಟುನಿಟ್ಟಾಗಿವೆ. ಹೆರಿಗೆಯಾದ ನಂತರ ಸೂತಕ ಮನೆಯಲ್ಲಿ ಅವರ ಅಣ್ಣ-ತಮ್ಮಂದಿರಿಗೆ ಮಾತ್ರ ಪ್ರವೇಶವಿರುತ್ತದೆ. ಏಕೆಂದರೆ ಆ ಮಗುವಿನ ಮುಖವನ್ನು ನೋಡುವಂತಹ ಸಂದರ್ಭದಲ್ಲಿ ಏನಾದರೂ ಕೊಟ್ಟು ಮುಖವನ್ನು ನೋಡಬೇಕಾಗುತ್ತದೆ. ಆದರೆ ಬೇರೆ ಬೇರೆ ಸಮುದಾಯಗಳಲ್ಲಿ ಸೂತಕದ ಮನೆಯೊಳಗೆ ಬರುವುದಿಲ್ಲ. ನಂತರ ಇವರು ಸಹ ಬೇರೆಯವರ ಮನೆಯೊಳಗೆ ಹೋಗುವುದಿಲ್ಲ. ಹೆರಿಗೆ ಆದ ಮೂರು ದಿನಗಳಲ್ಲಿ ಅಣ್ಣ ತಮ್ಮಂದಿರು ಸೇರಿಕೊಂಡು ಸೂತಕ (ಮುಟ್ಟಿನ ಮನೆ)ದ ಮನೆಗೆ ಸುಣ್ಣವನ್ನು ಬಳಿದು ಗೋಮೂತ್ರವನ್ನು ಮನೆಯ ಸುತ್ತ ಮುತ್ತ ಮನೆಯ ಒಳಗಡೆ ಸಿಂಪಡಿಸಿ ಅಂದರೆ ಗೋಮಂತ್ರವನ್ನು ಹಾಕಿ ಮನೆಗೆ ಶಾಂತಿಯನ್ನು ತರುತ್ತಿದ್ದರು. ಹೆರಿಗೆಯಾದ ಮೂರನೇ ದಿನದಂದು ಬಾಣಂತಿಗೆ ಮತ್ತು ಕೂಸಿಗೆ ಅವರ ಸಂಬಂಧಿಕರು ತಮ್ಮ ಮನೆಗಳಿಂದ ನೀರನ್ನು ತಂದು ಬೇವಿನ ಸೊಪ್ಪನ್ನು ನೀರಿನಲ್ಲಿ ಹಾಕಿ ಅದರಿಂದ ಸ್ನಾನವನ್ನು ಮಾಡಿಸಿ ಬೆಂಕಿಯ ಕೆಂಡದ ಮುಂದೆ ಆ ಗರ್ಭಿಣಿ ಸ್ತ್ರೀಯನ್ನು ಕುಳ್ಳಿರಿಸುತ್ತಿದ್ದರು.

ಗರ್ಭಿಣಿಗೆ ಹೆರಿಗೆಯಾದ ನಂತರ ಹುಟ್ಟಿದ ಮಗುವಿಗೆ ಬಿಸಿ ನೀರಿನಿಂದ ಸ್ನಾನವನ್ನು ಮಾಡಿಸಿ ಮೂರು ದಿನಗಳವರೆಗೆ ಒಂದು ಮೊರದಲ್ಲಿ ಬಟ್ಟೆ ಹಾಸಿ ಮಲಗಿಸುತ್ತಿದ್ದರು. ನಂತರ ತೊಟ್ಟಿಲು ಕಟ್ಟಿ ಅದರಲ್ಲಿ ಮಗುವನ್ನು ಮಲಗಿಸುವರು. ಮಗು ಏನಾದರೂ ಮಲಗದಿದ್ದರೆ ಒಂದು ಹಾಡನ್ನು ಹಾಡುತ್ತಿದ್ದರು.

ಲೋ ಲೋ ಲೋ...ಲಾಯೀ, ಯಾರಮ್ಮ ಬಡುದಾರೆ

ರಾಮಣ್ಣನನ್ನ ಸೋ ಲಾಲಾಲೀ, ಹೀಗೆ ಜನಪದರು ಹಾಡವಂತಹ ಹಾಡುಗಳನ್ನು ಹಾಡುತ್ತಿದ್ದರು. ನಂತರ ಹುಟ್ಟಿದ ಮಗುವಿಗೆ ಅಂದು ಬೇವಿನ ಸೊಪ್ಪನ್ನು ಅರೆದು ಚೆನ್ನಾಗಿ ಮೈಗೆ ಹಚ್ಚಿ ನಂತರ ಸ್ನಾನ ಮಾಡಿಸುತ್ತಾರೆ. ಹೀಗೆ ಮಾಡುವುದರಿಂದ ಮಗುವಿಗೆ ಯಾವುದೇ ರೋಗ ಬರುವುದಿಲ್ಲವೆಂದು ನಂಬಿಕೆ ಇವರಲ್ಲಿದೆ. ಈ ಪದ್ಧತಿ ಅನೇಕ ಸಮುದಾಯಗಳಲ್ಲಿದೆ ಎಂದು ಹೇಳಬಹುದು. ಮಗುವಿನ ಜನನದ ನಂತರ ಗಂಡನ ಮನೆಗೆ ತವರು

ಮನೆಯವರ ಮನೆಯ ಸಂಬಂಧಿಕನೇ ಹೋಗಿ ಸುದ್ದಿಯನ್ನು ತಿಳಿಸುತ್ತಾನೆ. ನಂತರ ಮಗುವಿನ ತಂದೆಯಾದವನು ಮಗುವಿನ ಕೈಯಲ್ಲಿ ಬಂಗಾರದ ಉಂಗುರವನ್ನು ಕೊಟ್ಟು ಅಥವಾ ಹಣವನ್ನು ಕೈಯಲ್ಲಿಟ್ಟು ಮೊದಲ ಸಲ ಆ ಮಗುವಿನ ಮುಖವನ್ನು ನೋಡುತ್ತಾನೆ. ಇದು ಮಾದಿಗರಲ್ಲಿ ಒಂದು ಸಂಪ್ರದಾಯ.

ಗರ್ಭಿಣಿ ಮಗುವಿಗೆ ಜನ್ಮ ನೀಡಿದಾಗ ನಂತರ ಹೆರಿಗೆಯಿಂದ ಬರುವ ಮಾಸವನ್ನು ತೆಗೆದುಕೊಂಡು ಒಂದು ಮಣ್ಣಿನ ಮಡಿಕೆಯಲ್ಲಿ ಹಾಕಿ ಮನೆಯ ಪಕ್ಕದಲ್ಲಿ ಒಂದು ಅಡಿಯಷ್ಟು ಭೂಮಿಯನ್ನು ಅಗೆದು ಆ ಮಡಿಕೆಯನ್ನು ಆ ಭೂಮಿಯಲ್ಲಿ ಇಟ್ಟು ಅದರ ಮೇಲೆ ಬಂಡೆಯನ್ನಿಟ್ಟು ಮುಚ್ಚುತ್ತಾರೆ. ಏಕೆಂದರೆ, ನಾಯಿ ನರಿಗಳು ಮುಟ್ಟದಂತೆ ಮುಚ್ಚುತ್ತಾರೆ. ಏಕೆಂದರೆ ನಾಯಿ ನರಿಗಳು ಮುಟ್ಟದಂತೆ ಮುಚ್ಚುತ್ತಾರೆ. ಮಗು ಸ್ವಲ್ಪ ಬೆಳೆಯುವವರೆಗೆ ಮನೆಯ ಹಿರಿಯ ಹೆಣ್ಣುಮಗಳು ಮಗುವನ್ನು ಮತ್ತು ಬಾಣಂತಿಯನ್ನು ಆರೈಕೆ ಮಾಡಬೇಕಾಗುತ್ತದೆ. ನಂತರ ಮಗುವಿಗೆ ಮತ್ತು ಬಾಣಂತಿಗೆ ಬೇಕಾದಂತಹ ವಸ್ತುಗಳನ್ನು ಮತ್ತು ಆಹಾರವನ್ನು ಕೊಡಬೇಕಾಗುತ್ತದೆ.

### ೪.೧.೩. ನಾಮಕರಣ

ಹುಟ್ಟಿದ ಮಗು ಗಂಡಾಗಲಿ ಅಥವಾ ಹೆಣ್ಣಾಗಲಿ ಜನಿಸಿದ ೧೬ ದಿನಗಳಲ್ಲಿ ಹೆಸರಿಡುವ ಕಾರ್ಯವನ್ನು ಮಾದಿಗರ ಸಮುದಾಯದಲ್ಲಿ ಆಚರಿಸುತ್ತಾರೆ. ಆದರೆ ಇತರೆ ಸಮುದಾಯಗಳಲ್ಲಿ ಮಗು ಜನಿಸಿದ ಮೂರು ತಿಂಗಳು ಅಥವಾ ಐದು ತಿಂಗಳೊಳಗಾಗಿ ನಾಮಕರಣವನ್ನು ಮಾಡುತ್ತಾರೆ. ಏಕೆಂದರೆ ಇವರಲ್ಲಿ ಒಂದು ನಂಬಿಕೆ ಇದೆ. ೧೭ ದಿನಗಳಲ್ಲಿ ವಿಧಿ ಎಂಬುವಳು ಮಗುವಿನ ಹಣೆಯ ಮೇಲೆ ಹೆಸರನ್ನು ಬರೆಯುತ್ತಾಳಂತೆ. ಆದ್ದರಿಂದ ಈ ಸಮುದಾಯದವರು ಜನಿಸಿದ ಮಗುವಿಗೆ ೧೬ ದಿನಗಳಲ್ಲಿ ನಾಮಕರಣವನ್ನು ಮಾಡುತ್ತಾರೆ. ನಾಮಕರಣಕ್ಕೆ ಹೊಸ ತೊಟ್ಟಿಲೇ ಬೇಕೆಂಬ ಪದ್ಧತಿ ಇಲ್ಲ. ತಮ್ಮ ಮನೆಯಲ್ಲಿರುವ ತೊಟ್ಟಿಲು ಇದ್ದರೆ ಸಾಕು. ಆದರೆ ಅಕ್ಕಪಕ್ಕದ ಅಥವಾ ಬಂಧುಗಳ ಮನೆಯಿಂದ ತೊಟ್ಟಿಲು ತರುವ ಸಂಪ್ರದಾಯ ಇವರಲ್ಲಿಲ್ಲ.

ನಾಮಕರಣ ದಿನದಂದು ಇಡೀ ಮನೆಯನ್ನು ತೊಳೆದು ಸಗಣಿಯನ್ನು ಹಾಕಿ ಮನೆಯಲ್ಲಿ ಇರುವಂತಹ ಸಾಮಾನುಗಳನ್ನು ಒಂದು ಕಡೆ ಇಟ್ಟು ಆಚರಣೆಯನ್ನು ಆಚರಿಸುತ್ತಾರೆ. ಅಂದರೆ ಮಗುವಿಗೆ ಹೆಸರಿಡುವ ಸಂದರ್ಭದಲ್ಲಿ ಓಣಿಯಲ್ಲಿನ ಮುತ್ತೈದೆಯರು, ಸಂಬಂಧಿಕರು ಹಾಗೂ ಮಗುವಿನ ತಂದೆಯ ಬಂಧುಗಳು ಈ ನಾಮಕರಣಕ್ಕೆ ಬಂದು ಸೇರುತ್ತಾರೆ. ಅಂದರೆ ಹೆಸರಿಡುವ ಸಂದರ್ಭದಲ್ಲಿ ಶಾಸ್ತ್ರವನ್ನು ಕೇಳಿಸಿಕೊಂಡು ಬಂದು ಆ ಶಾಸ್ತ್ರದಲ್ಲಿ ಬಂದಿರುವಂತಹ ಸಮಯದ ಮೂಲಕ ಹೆಸರಿಡುತ್ತಾರೆ. ಅಂದರೆ ಅದು ಬೆಳಿಗ್ಗೆ ೯ ರಿಂದ ೧೧ ಗಂಟೆಯೊಳಗೆ ಬಾಣಂತಿಗೆ ಮತ್ತು ಮಗುವಿಗೆ ಬಿಸಿನೀರಿನಿಂದ ಸ್ನಾನ ಮಾಡಿಸಿ ನಂತರ ಸಾಯಂಕಾಲ ಗಂಗೆ ಪೂಜೆ ಮಾಡಿಸಿ ಗಂಡನ ಮನೆಯವರು ತಂದಿರುವ ತೊಟ್ಟಿಲನ್ನು ಕಟ್ಟಿ ತೊಟ್ಟಿಲಲ್ಲಿ ಮಗುವನ್ನು ಹಾಕಿ ಜೋಗುಳ ಹಾಡುತ್ತಾರೆ. ಮಗುವಿನ ಅತ್ತೆಯವರು ಮತ್ತು ಸೋದರ ಮಾವನು ಒಂದು ಗಂಗಾಳವನ್ನು ಬಾರಿಸುತ್ತಾ 'ಲೋಕದ ಈ ಬಾಯಿ ತಿದ್ದಿದರ‍್ಯಾರೇ, ಗಂಗಾಳ ಬಾರಿಸಿದರ‍್ಯಾರೇ' ಎಂದು ಬಾರಿಸುತ್ತಾ ಹೆಸರನ್ನು ಇಡುತ್ತಾರೆ. ಅಂದರೆ ಮಾದಿಗರ ಸಮುದಾಯದಲ್ಲಿ ಆ ಮಗುವಿನ ಕಿವಿಯಲ್ಲಿ ಹೆಸರನ್ನು ಇಡುತ್ತಾರೆ. ಅಂದರೆ ಮೂರು ಸಾರಿ ಹೇಳುತ್ತಾರೆ. ಇದರಿಂದ ಮನೆಯಲ್ಲಿ ಶಾಂತಿ ನೆಲೆಸುತ್ತದೆ ಎಂದು ನಂಬಲಾಗಿದೆ. ಆಗ ಹೆಸರಿಟ್ಟಾಗ ಅಂದಿನಿಂದ ಸೂತಕ ಮುರಿದು ಎಲ್ಲರೂ ಮನೆಯ ಒಳಗಡೆ ಹೋಗುವರು. ಮಾದಿಗ ಸಮುದಾಯದಲ್ಲಿ ಮಗುವಿನ ತಂದೆಯ ಸಂಬಂಧಿಕರ ಅಪೇಕ್ಷೆಯಂತೆ ಮಗುವಿನ ನಾಮಕರಣ ನಡೆಯುತ್ತದೆ. ಇವರು ತಮ್ಮ ಜನಾಂಗದ ಪುರಾಣ ಪುರುಷರ, ಹಿರಿಯ ವ್ಯಕ್ತಿಗಳ, ಕುಲದೇವತೆಗಳ ಹೆಸರುಗಳನ್ನು ಇಡುತ್ತಿದ್ದರು. ಆ ಹೆಸರುಗಳೆಂದರೆ ದುರುಗುಪ್ಪ, ಗಂಗಣ್ಣ, ಮರಿಯಪ್ಪ, ಯಲ್ಲಪ್ಪ, ಇಡ್ಲಿ ಹೊಂಡ್ರಪ್ಪ, ಸಣ್ಣ ಈರಮ್ಮ, ಮಾರಕ್ಕ, ದುರುಗಮ್ಮ, ಯಲ್ಲಕ್ಕ, ಓಬಕ್ಕ, ಕರಿಯಮ್ಮ ಮುಂತಾದ ಹೆಸರುಗಳನ್ನು ಈ ಸಮುದಾಯದಲ್ಲಿ ಇಡುತ್ತಿದ್ದರು.

ಈ ಸಮುದಾಯದಲ್ಲಿ ಹುಟ್ಟಿದ ಮಗುವಿಗೆ ವಾಸುದೇವನ ಹಾಲನ್ನು ಕುಡಿಸುತ್ತಿದ್ದರು. ಏಕೆಂದರೆ ದೇಹ ದಷ್ಟಪುಷ್ಟವಾಗಲ ಎಂದು ಆ ಹಾಲನ್ನು ಕುಡಿಸುತ್ತಾರೆ. ನಂತರ ಕಸ್ತೂರಿ, ಗೋರಂಜನವನ್ನು ನೀರಿಗೆ ಸೇರಿಸಿ ಕುಡಿಸುತ್ತಾರೆ. ಮಕ್ಕಳಿಗೆ ಮೈಮೇಲೆ ಅಮ್ಮ ಕಾಣಿಸಿಕೊಂಡರೆ ಬೇವಿನ ಸೊಪ್ಪನ್ನು ಅರೆದು ಚೆನ್ನಾಗಿ ಮೈಗೆ ಹಚ್ಚಿ ನಂತರ ಬಿಸಿನೀರಿನಿಂದ ಸ್ನಾನ ಮಾಡಿಸುತ್ತಾರೆ. ಮತ್ತು ಹೊಸ್ತಿಲ ಮೇಲೆ ಆ ಮಗುವನ್ನು ಕೂರಿಸಿ ಬೇಯಿಸಿದ

ಗುಗ್ಗರಿಯನ್ನು ಮೊರದಲ್ಲಿ ಹಾಕಿ ಮೂರು ಸಾರಿ ಚಪ್ಪರಿಸಿ ಆ ಗುಗ್ಗರಿಯನ್ನು ಆ ಮನೆಯ ಮುಂದಿರುವಂತಹ ಮಕ್ಕಳಿಗೆ ಅಥವಾ ದೊಡ್ಡವರಿಗೆ ಕೊಡುತ್ತಾರೆ. ಹೀಗೆ ಮಾಡುವುದರಿಂದ ಕಾಣಿಸಿಕೊಂಡ ಅಮ್ಮ ಗುಣಮುಖವಾಗುತ್ತದೆಂಬ ನಂಬಿಕೆ ಈ ಸಮುದಾಯದಲ್ಲಿದೆ. ನಂತರ ಒಂದು ಸಾರಿ ಮಗುವು ರಂಪ ಮಾಡುವಂತಹ ಸಂದರ್ಭ ಸಹ ಬರಬಹುದು. ಏಕೆಂದರೆ ಆ ಮಗುವಿನ ಮೈಯಲ್ಲಿ ಅಮ್ಮ ಬೆಂಕಿಯಂತೆ ರಾರಾಜಿಸುತ್ತಾಳೆ. ಆಗ ಆ ಮಗು ತಡೆದುಕೊಳ್ಳುವುದಿಲ್ಲ. ಆಗ ಅದು ಅಳಲಿಕ್ಕೆ ಪ್ರಾರಂಭಿಸುತ್ತದೆ. ನಾಮಕರಣಕ್ಕೆ ಬಂದಂತಹ ಸಂಬಂಧಿಗಳಿಗೆ ಹಾಗೂ ಬಂಧುಬಳಗದವರಿಗೆ ಹಾಗೂ ಊರಿನ ಮುಖಂಡರಿಗೆ ಹುಗ್ಗಿ, ಅನ್ನ ಸಾಂಬಾರನ್ನು ಊಟಕ್ಕೆ ಹಾಕುತ್ತಾರೆ. ನಾಮಕರಣದ ಸಂದರ್ಭದಲ್ಲಿ ಹಲವಾರು ಜನರು ಬಂದು ನೆಲಸುತ್ತಾರೆ ಎಂದು ಹೇಳಬಹುದು.

### ೪.೧.೪. ಬಾಣಂತಿಯ ದೈವ ದರ್ಶನ

ಹೆರಿಗೆಯ ನಂತರ ಐದು ತಿಂಗಳಲ್ಲಿ ಅಥವಾ ಮೂರು ತಿಂಗಳಲ್ಲಿ ಗಂಡನ ಮನೆಗೆ ಹೋಗುತ್ತಾಳೆ. ಅಲ್ಲದೆ ಅವಳಿಗೆ ಬಹುದಿನಗಳ ಕಾಲ ಮಕ್ಕಳಾಗದಿದ್ದರೆ ಆ ಮಹಿಳೆ ನೆಲದ ಮೇಲೆ ಊಟಮಾಡುವ ವ್ರತವನ್ನು ಆಚರಿಸುತ್ತಾಳೆ. ಅಲ್ಲದೆ ಅವಳ ಇಷ್ಟ ದೇವತೆಗಳಲ್ಲಿ ಬೇಡಿಕೊಳ್ಳುತ್ತಾಳೆ.[೨] ಮಾದಿಗ ಸಮುದಾಯದಲ್ಲಿ ಬಹುದಿನಗಳವರೆಗೆ ಮಕ್ಕಳಾಗದಿದ್ದರೆ ಆ ಮಹಿಳೆ, ಒಡೇರಹಳ್ಳಿ ದುರುಗಮ್ಮ ದೇವರಿಗೆ ಹರಕೆಯನ್ನು ಮಾಡಿಕೊಂಡಿರುತ್ತಾಳೆ. ಆ ಮಾರೆಮ್ಮನ ಜಾತ್ರೆಯ ದಿನದಂದು ಆ ಗುಡಿಯ ಮುಂದೆ ನಿದ್ರೆ ಮಾಡಿ ಬೆಲ್ಲ ಮತ್ತು ಹುರುಳಿಯನ್ನು ಕೊಟ್ಟು ಪೂಜಾರಿಯ ಪಾದಕ್ಕೆ ಬಿದ್ದು ತನ್ನ ಹರಕೆಯನ್ನು ತೀರಿಸುತ್ತಾರೆ. ನಂತರ ಅವಳು ತನ್ನ ಮಕ್ಕಳಾದಂತಹ ಸಂದರ್ಭದಲ್ಲಿ ಅವಳು ಆ ಗುಡಿಯಲ್ಲಿ ಬಂದು ಪೂಜೆಯನ್ನು ಮಾಡಿಕೊಂಡು ಹೋಗುತ್ತಾಳೆ.

### ೪.೧.೫. ಋತುಮತಿ ಶಾಸ್ತ್ರ

ಮಾದಿಗರ ಸಮುದಾಯದಲ್ಲಿ ಇದೊಂದು ವಿಶಿಷ್ಟ ಆಚರಣೆ ಆಗಿದೆ. ಹಿಂದೆ ಹೆಣ್ಣುಮಗಳು ಋತುಮತಿಯಾದ ದಿನವೇ ಮನೆಯ ಹೊರಗಡೆ ಮೂರು ದಿನಗಳ ಕಾಲ ಇರುತ್ತಿದ್ದಳು. ಮೂರು ದಿನಗಳಾದ ಮೇಲೆ ಅವಳಿಗೆ ಸ್ನಾನ ಮಾಡಿಸಿ ಬಟ್ಟೆ ಬದಲಾಯಿಸಿ ಒಳಗೆ ಕರೆದುಕೊಳ್ಳುತ್ತಿದ್ದರು. ಈ ಸಮುದಾಯದಲ್ಲಿನ ಹೆಣ್ಣುಮಗಳು ಸಾಮಾನ್ಯವಾಗಿ ೧೨ ಮತ್ತು ೧೪ ವರ್ಷ ವಯಸ್ಸಿನಲ್ಲಿ ಋತುಮತಿಯಾಗುತ್ತಾರೆ. ಋತುಮತಿಯಾದ ಕನ್ಯೆಯನ್ನು ಮನೆಯಲ್ಲಿನ ದಿನದಿನಕ್ಕೆ ಸ್ನಾನ ಮಾಡಿಸಿ ಬೇರೆ ಬೇರೆ ಅಡಿಗೆಯನ್ನು ಮಾಡಿ ಅವಳಿಗೆ ಕೊಡಬೇಕಾಗುತ್ತದೆ. ನಂತರ ಈ ಸಮುದಾಯದಲ್ಲಿ ಋತುಮತಿಯಾಗಿದ್ದಾಳೆ ಎಂದ ಕೂಡಲೇ ಆ ಕನ್ಯೆಯ ಸೋದರ ಮಾವನಿಗೆ ತಿಳಿಸಿ ಅವನಿಂದಲೇ ಹೆಣ್ಣೆ ನೀರನ್ನು ಹಾಕಿ ಆ ಕನ್ಯೆಯನ್ನು ಮನೆಯ ಒಳಗಡೆ ಕರೆದುಕೊಳ್ಳುತ್ತಿದ್ದರು. ಕಾರಣ ಸೋದರ ಮಾವನಿಗೆ ಋತುಮತಿಯಾದ ಕನ್ಯೆಯ ಬಗ್ಗೆ ಯಾವುದೇ ಕೆಟ್ಟ ಅಭಿಪ್ರಾಯ ಇರುವುದಿಲ್ಲ. ತಮ್ಮ ಕುಲದಲ್ಲಿಯೇ ವಿವಾಹ ಸಂಬಂಧಗಳು ಬರುವುದರಿಂದ ಮತ್ತು ದೂರದ ಸಂಬಂಧಿಗಳ ಬಗೆಗೆ ಹೆಚ್ಚಿನ ಆಸಕ್ತಿ ಇವರಲ್ಲಿ ಇಲ್ಲದೇ ಇರುವುದರಿಂದ ಕನ್ಯೆಯ ಸೋದರ ಮಾವನಿಗೆ ಹೆಣ್ಣೆ ನೀರನ್ನು ಹಾಕಲು ಅವಕಾಶವನ್ನು ಕಲ್ಪಿಸಿಕೊಟ್ಟರು.

ಋತುಮತಿಯಾದ ಕನ್ಯೆಗೆ ಅಂದು ಅರಿಶಿಣ ಮತ್ತು ಹೆಣ್ಣೆಯನ್ನು ಹಚ್ಚಿ ಬಿಸಿನೀರಿನಿಂದ ಸ್ನಾನವನ್ನು ಮಾಡಿಸುತ್ತಾರೆ. ಅವಳು ಪ್ರತಿದಿನ ಸ್ನಾನಮಾಡಿ ಅಗಸರವಳು ಮಡಿ ಮಾಡಿ ತಂದುಕೊಟ್ಟ ಬಟ್ಟೆಗಳನ್ನು ಉಡಬೇಕು ಎಂಬ ನಿಯಮ ಇಲ್ಲಿದೆ. ಸಾಮಾನ್ಯವಾಗಿ ಒಂಬತ್ತು ಅಥವಾ ಹದಿನಾರು ದಿನಗಳ ಕಾಲ ಮನೆಯಲ್ಲಿಯೇ ಇರಬೇಕಾಗುತ್ತದೆ. ನಂತರ ೧೯ ದಿನ ಋತುಮತಿ ಕನ್ಯೆಗೆ ಸ್ನಾನಮಾಡಿಸಿದ ನೀರನ್ನು ಯಾರು ತುಳಿಯದಂತೆ ಮತ್ತು ಆ ನೀರನ್ನು ಯಾರು ದಾಟದಂತೆ ಬೇರೆಜಾಗಕ್ಕೆ ಹೋಗಿ ಸ್ನಾನಮಾಡಿಸುತ್ತಾರೆ. ಸ್ನಾನ ಆದನಂತರ ಅವಳಿಗೆ ಸೀರೆ ತೊಡಿಸಿ, ಅರಿಶಿಣ ಹಚ್ಚಿ ಹೆಣ್ಣೆ ಹಚ್ಚಿ ಬಿಸಿನೀರಿನಿಂದ ಸ್ನಾನ ಮಾಡಿಸುತ್ತಾರೆ. ಆ ದಿನ ಸಾಯಂಕಾಲ ಹೊಸಬಟ್ಟೆಯನ್ನು ಹಾಕಿ ಮನೆಯ ಮುಂದೆ ತೋರಣಕಟ್ಟಿ, ಅಲಂಕಾರ ಮಾಡಿ ಆ ಕನ್ಯೆಯನ್ನು ಕೂಡ್ರಿಸುವ ಕಾರ್ಯಕ್ರಮವನ್ನು ಮಾಡುತ್ತಾರೆ. ಕೂಡ್ರಿಸುವ ಸಂದರ್ಭದಲ್ಲಿ ಆಡುವ ಪದಗಳು ಈ ಕೆಳಕಂಡಂತಿವೆ.

ಒತ್ತಿನವರೆಗೆ ತಿರುಗ್ಯಾಳೆ ತಮ್ಮನ
ಬಣ್ಣದ ಸೀರ್ಯಾಗಳ ನಶಿಗಂಪ
ಒತ್ತಿನವರಗೆ ತಿರುಗ್ಯಾಳೇ ಅನಂತಮ್ಮ
ಬಣ್ಣದ ಸೀರ್ಯಾಗಳ ನಶಿಗಂಪೆ,
ಹಾಲುಬಾನಹುಂಡು ತಿರುಗ್ಯಾಳೆ
ಓಗಿವರಗ ತಿರುಗ್ಯಾಳೆ ||ಪ||
ಓಗಿವರಗ ತಿರುಗ್ಯಾಳ ನಮ್ಮ ಅನಿತಮ್ಮ
ನಾಣ್ಯದ ಸೀರೆಗಳ ನಶಿಗಂಪೆ,
ಏರಿಮೇಲೆ ಜಾಲರರಣ್ಣ
ಬೇಗನೆ ತೆಗೆಯಬಾರೋ
ನಮ್ಮ ಬಾಲಮ್ಮ ಮೈನೆರತ ಒಸಿನಾಲೆ
ಗೊಕ್ಕನ ತೆಗೆಯೋ ಬಾರೋ ಬೀಗನ್ನ
ಗೊಕ್ಕನ ತೆಗೆಯೋ ಬೀಗನ್ನ
ನಮ್ಮ ಬಾಲಮ್ಮ ಮೈನೆರತಳ
ಹೊಚನಾದೇ,

ಹೀಗೆ ಜನಪದರು ಅನಕ್ಷರಸ್ಥರು ಕೂಡ್ರಿಸುವ ಸಂದರ್ಭದಲ್ಲಿ ಈ ಹಾಡುಗಳನ್ನು ಹಿಮ್ಮೇಳದವರು ಮತ್ತು ಮುಮ್ಮೇಳದವರು ಆಡುತ್ತಾರೆ ಎಂದು ಹೇಳಬಹುದು. ನಂತರ ಇವರಿಗೆ ಸಂಬಂಧಪಟ್ಟ ಬಂಧು-ಬಳಗ ಎಲ್ಲರೂ ಸೇರಿ ಕನ್ಯೆಗೆ ಹೊಸ ಸೀರೆ, ಕುಪ್ಪಸ ಹೂವಿನ ಹಾರ ಹಾಕಿ ಸಾಯಂಕಾಲ ಗಂಗೆ ಪೂಜೆ ಮಾಡಿ ನಂತರ ಗೋವಿಗೆ ಪೂಜೆಯನ್ನು ಮಾಡಿ ಆ ಗೋವನ್ನು ಮನೆಯ ಒಳಗೆ ಕರೆದುಕೊಂಡು ಹೋಗುತ್ತಾರೆ. ಅದಾದ ನಂತರ ರಾತ್ರಿಯ ಸಮಯದಲ್ಲಿ ಋತುಮತಿಯಾದ ಕನ್ಯೆಯನ್ನು ಕುರ್ಚಿಯ ಮೇಲೆ ಕುಳ್ಳಿರಿಸುತ್ತಾರೆ. ನಂತರ ಮುತ್ತೈದೆಯರು ಆರತಿಯನ್ನು ಬೆಳಗುತ್ತಾರೆ. ಈ ಸಮುದಾಯದ ನೆಂಟರು ಋತುಮತಿಯಾದ ಕನ್ಯೆಗೆ ಮುಯ್ಯಿ ಮಾಡುವ ಕಾರ್ಯವೂ ನಡೆಸುವರು. ಈ ಸಮುದಾಯದಲ್ಲಿ ನೆಂಟರು ಸಹ ಕನ್ಯೆಗೆ ಸಿಹಿ ಪದಾರ್ಥಗಳನ್ನು ತಂದಿರುತ್ತಾರೆ. ನಂತರ ಅವಳನ್ನು ಮನೆಯ ಒಳಗಡೆ ಕರೆದುಕೊಂಡು ಹೋಗಿ ಆರತಿಯನ್ನು ಮಾಡಿ ಋತುಮತಿ ಶಾಸ್ತ್ರವನ್ನು ಮುಗಿಸುತ್ತಾರೆ.

"ನಂತರ ಋತುಮತಿಯಾದ ಕನ್ಯೆ ಮದುವೆಯಾಗಿದ್ದರೆ ಈ ವಿಷಯವನ್ನು ಗಂಡನ ಮನೆಗೆ ಈ ಸುದ್ದಿಯನ್ನು ಮುಟ್ಟಿಸುತ್ತಾರೆ. ಆಗ ಗಂಡನ ಮನೆಯವರು ೧೬ ದಿನದಂದು ಹೊಸಬಟ್ಟೆಯನ್ನು ತಂದು ಮತ್ತು ಸಿಹಿ ಊಟವನ್ನು ಕಟ್ಟಿಕೊಂಡು ಬಂದು ಅವಳ ಗಂಡನೊಂದಿಗೆ ಬರುತ್ತಾಳೆ. ಅದೇ ದಿನ ವಿಶೇಷ ಕಾರ್ಯಗಳನ್ನು ನೆರವೇರಿಸುತ್ತಾರೆ. ಮದುವೆಯ ಸಂದರ್ಭದಲ್ಲಿ ಕನ್ಯೆಯು ಋತುಮತಿಯಾದರೆ ವಿಶೇಷ ಕಾರ್ಯಕ್ರಮಗಳನ್ನು ಮೂರು ತಿಂಗಳ ನಂತರ ನೆರವೇರಿಸುತ್ತಾರೆ". ಇತ್ತೀಚಿನ ಸಮುದಾಯಗಳು ನಾಗರೀಕ ಪ್ರಭಾವಕ್ಕೆ ಒಳಗಾಗಿ ಬೇರೆ ಬೇರೆ ಸಮುದಾಯಗಳ ಜೊತೆಯಲ್ಲಿ ನೆಲಸಿರುವುದರಿರಿಂದ ಹಳೆಯ ಸಂಪ್ರದಾಯಗಳನ್ನು ಹೊಡೆದು ಹಾಕಿ ಹೊಸ ಆಚರಣೆಯ ಪದ್ಧತಿಯನ್ನು ಕಂಡುಕೊಂಡಿದ್ದಾರೆ. ಈಗಿನ ಕಾಲದಲ್ಲಿ ಒಂದು ಪ್ರತ್ಯೇಕವಾದ ಮನೆಯಲ್ಲಿ ಅವಳನ್ನು ಕೂಡ್ರಿಸುತ್ತಾರೆ. ಅಲ್ಲಿಗೆ ಅವರು ೧೬ ದಿನಗಳವರೆಗೆ ವಿಶೇಷವಾದ ಸಿಹಿ ತಿಂಡಿಗಳನ್ನು ಕೊಡುತ್ತಾರೆ. ಮತ್ತು ಬಂಗಾರದ ಒಡವೆ, ಹೊಸ ಸೀರೆ, ಕುಪ್ಪಸ, ಹೂವು ಮುಡಿಸಿ ಶೃಂಗಾರ ಮಾಡಿ ರಾತ್ರಿ ಕುರ್ಚಿಯ ಮೇಲೆ ಕೂಡ್ರಿಸುತ್ತಾರೆ.

ಹಿಂದೆ ಋತುಮತಿಯಾದ ಕನ್ಯೆಗೆ ೩-೫ ವರ್ಷದಲ್ಲೇ ವಿವಾಹ ಮಾಡುತ್ತಿದ್ದರು. ಆದರೆ ಇತ್ತೀಚಿನ ಶೈಕ್ಷಣಿಕ ವರ್ಷದಲ್ಲಿ ಸ್ತ್ರೀಯು ಸಹ ಪಾದಾರ್ಪಣೆ ಮಾಡಿದ್ದರಿಂದ ಋತುಮತಿಯಾಗಿ ೮-೯ ವರ್ಷಗಳಾದರೂ ವಿವಾಹ

ಆಗುವುದಿಲ್ಲ. ಇದರಿಂದ ಋತುಮತಿ ಸಂಪ್ರದಾಯಗಳು ಬಹಳ ಮಟ್ಟಿಗೆ ಕ್ಷೀಣಿಸುತ್ತವೆ. ಆರ್ಥಿಕವಾಗಿ ಹಿಂದುಳಿದ ಕೆಲವೊಂದು ಕುಟುಂಬಗಳಲ್ಲಿ ಒಂಬತ್ತನೇ ದಿನದಲ್ಲಿ ಗಂಗೆ ಪೂಜೆ ಮಾಡಿ ಒಳಗಡೆ ಕರೆದುಕೊಳ್ಳುತ್ತಾರೆ.

### ೪.೧.೬. ಮದುವೆ

ಸಾಮಾನ್ಯವಾಗಿ ಹೊಲೆಯ ಸಮುದಾಯದ ಉಪಪಂಗಡಗಳ ಮದುವೆಯ ಪದ್ಧತಿಯಲ್ಲಿ ಸಾಮ್ಯತೆ ಕಂಡುಬಂದರೂ ಮಾದಿಗ ಸಮುದಾಯದಲ್ಲಿ ಕೆಲ ವಿಶಿಷ್ಟ ಸಂಪ್ರದಾಯಗಳನ್ನು ಗುರುತಿಸಬಹುದಾಗಿದೆ. ಮೊದಲು ಮಾದಿಗ ಸಮುದಾಯದಲ್ಲಿ ಮದುವೆ ಪದ್ಧತಿ ಸರಳವಾಗಿದ್ದು, ಕ್ರಮೇಣ ಕೆಲ ಆಚರಣೆಗಳು ರೂಢಿಸಿಕೊಂಡು ಬಂದಿರಬಹುದು. ಕಾಲಾಂತರದಲ್ಲಿ ನಾಗರೀಕತೆಯ ಪ್ರಭಾವಕ್ಕೆ ಒಳಗಾಗಿರುವುದನ್ನು ನಾವು ಕಾಣಬಹುದು. ಶತ ಶತಮಾನಗಳವರೆಗೆ ಅಲೆಮಾರಿಗಳು ಕಾಡು ಮೇಡು ಬೆಟ್ಟ ಗುಡ್ಡ ಮತ್ತು ನಿರ್ಜನ ಪ್ರದೇಶದಲ್ಲಿ ಇದ್ದುಕೊಂಡು ಜೀವನ ಸಾಗಿಸುತ್ತಾ, ತಮ್ಮ ಸಂಸ್ಕೃತಿಯನ್ನು ಪ್ರತ್ಯೇಕವಾಗಿಯೇ ಉಳಿಸಿಕೊಂಡು, ರಕ್ಷಿಸಿಕೊಂಡು ಬಂದವುಗಳಾಗಿವೆ. ಆದ್ದರಿಂದ ಅವರದೇ ಆದಂತಹ ರೂಢಿ ಸಂಪ್ರದಾಯಗಳು ಹಿನ್ನೆಲೆಯಲ್ಲಿ ತಮ್ಮ ಮದುವೆ ಪದ್ಧತಿಯನ್ನು ರೂಢಿಸಿಕೊಂಡು ಬಂದಿದ್ದಾರೆ. ಎಂದು ಅವರ ಅಭಿಪ್ರಾಯವಾಗಿದೆ ಎಂದು ಹೇಳಬಹುದು. ವಿವಾಹವು ಜಗತ್ತಿನಾದ್ಯಂತ ಅಸ್ತಿತ್ವದಲ್ಲಿರುವಂತಹ ಒಂದು ಸಮಾಜಕ್ಕೆ ಸಂಸ್ಥೆ. ಮೂಲಭೂತವಾಗಿ ವಿವಾಹವು ಸ್ತ್ರೀ ಮತ್ತು ಪುರುಷ ಈ ಇಬ್ಬರ ವ್ಯಕ್ತಿಗಳ ನಡುವೆ ಏರ್ಪಡುವ ಸಂಬಂಧ, ವಿವಾಹದ ಬಗ್ಗೆ ಅನೇಕ ವಿದ್ವಾಂಸರೂ ಸಮಾಜಶಾಸ್ತ್ರಜ್ಞರು ಏಳಿಕೆ ನೀಡಿದ್ದಾರೆ.

ವೆಸ್ಟರ್‌ಮಾರ್ಕ್‌ರವರ ಪ್ರಕಾರ "ವಿವಾಹವೆಂದರೆ ಸ್ತ್ರೀಪುರುಷರ ನಡುವೆ ಏರ್ಪಡುವ ಶಾಶ್ವತ ಸಂಬಂಧ ಎಂದಿದ್ದಾರೆ."[೫] ನಂತರ ಇನ್ನೊಬ್ಬ ವ್ಯಕ್ತಿ ವಿವಾಹದ ಬಗ್ಗೆ ಹೇಳಿಕೆ ಕೊಟ್ಟಿದ್ದಾನೆ. ಮಲಿನೋವಸ್ಕಿ "ಸಂತತಿಯ ಸೃಷ್ಟಿಗಾಗಿ ಹಾಗೂ ಆ ಸಂತತಿಯ ಪಾಲನೆ ಪೋಷಣೆಗಾಗಿ ವ್ಯಕ್ತಿಗಳು ಮಾಡಿಕೊಂಡಿರುವ ಒಪ್ಪಂದವೇ ವಿವಾಹ ಆಗಿದೆ"[೬] ಕೆಲವೊಂದು ಬುಡಕಟ್ಟುಗಳು ತಮ್ಮದೇ ಆದ ಕುಲ, ಗೋತ್ರ ಚಿಹ್ನೆಗಳನ್ನು ಇಟ್ಟುಕೊಂಡು ಅದೇ ಸಮುದಾಯದ ಬೇರೆ ಬೇರೆ ಬೆಡಗುಗಳನ್ನು ಕಾಣಬಹುದು. ಅಥವಾ ಕುಲಗೋತ್ರ ಚಿಹ್ನೆಗಳನ್ನು ಹೊಂದಿರುವವರ ಜೊತೆಯಲ್ಲಿ ವಿವಾಹ ಸಂಬಂಧವನ್ನು ಏರ್ಪಾಡು ಮಾಡಿಕೊಳ್ಳುತ್ತಾ ಬಂದಿರುವುದನ್ನು ನಾವು ಕಾಣುತ್ತೇವೆ. ತಂದೆ ತಾಯಿಗಳು ಮಕ್ಕಳ ಮದುವೆಯನ್ನು ಒಂದು ಕಾಲದಲ್ಲಿ ನಿರ್ಧರಿಸುತ್ತಿದ್ದರು. ವಧು-ವರರು ಮದುವೆಯ ಪೂರ್ವದಲ್ಲಿ ನೋಡುವುದು, ಬೇಟಿಯಾಗುವುದು ನಿಷೇಧವಿತ್ತು. ಒಂದು ಬೆಡಗಿನವರಲ್ಲಿ ವೈವಾಹಿಕ ಸಂಬಂಧಗಳು ನಿಷೇಧ, ಇದನ್ನು ಇಂದಿಗೂ ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ನಂತರ ಮಾದಿಗರಲ್ಲಿ ಕಂಡುಬರುವ ಬೆಡಗುಗಳೆಂದರೆ ಐವಳ್ಳಿ, ಅಂಕೇಲು, ಬಂಢಾರಿ, ಛಿತ್ತಾಲರು (ಉರುವಲು ಉಪಯೋಗಿಸಿದ ಕಟ್ಟಿಗೆ) ಛತ್ರಿ, (ಕೊಡೆ) ಮೀನಿಂಗಲಾರು (ಮೀನಿಗಪ), ಮುಚ್ಚೇಲರು, (ಮುಚ್ಚಳಿಕೆಯವರು) ಸಣ್ಣಕ್ಕಿ (ಸಣ್ಣಕ್ಕಿಯವರು) ಮುಂತಾದವುಗಳು ಮಾದಿಗರು ಸಮುದಾಯದಲ್ಲಿ ಕೆಲವೊಂದು ಬೆಡಗುಗಳನ್ನು ಕಾಣಬಹುದು.

ನಂತರ ಮಾದಿಗರಲ್ಲಿಯೂ ಕೂಡ ಒಳಪಂಗಡಗಳು ಸಹ ಇದೆ. ಈ ಪಂಗಡಗಳು ಬಹುಶಃ ಅವರಾಡುವ ಭಾಷೆ, ಮಾಡುತ್ತಿರುವ ವೃತ್ತಿ, ಬದುಕುತ್ತಿರುವ ರೀತಿ-ನೀತಿ ನಡುವಳಿಕೆಯ ಮೇಲೆ ರಚನೆಯಾಗಿರಬಹುದು, ಮಾದಿಗರು ಆಡುತ್ತಿರುವ ಭಾಷೆಯನ್ನಾಧರಿಸಿ ರಚನೆಗೊಂಡ ಒಳಪಂಗಡಗಳು ಎರಡು ಒಂದು ಕನ್ನಡ ಮಾತನಾಡುವವರದು, ಇನ್ನೊಂದು ತೆಲುಗು ಮಾತನಾಡುವವರದು ಆಗಿರುತ್ತದೆ.

ಉದಾ ಹೊಲೆಯರ ಬೆಡಗು ಮತ್ತು ಮಾದಿಗರ ಬೆಡಗುಗಳು ಬೇರೆ ಬೇರೆ ಇರುವುದರಿಂದ ವೈವಾಹಿಕ ಸಂಬಂಧಗಳು ಏರ್ಪಡುತ್ತವೆ. ಒಂದೇ ಬೆಡಗಿನಲ್ಲಿ ವಿವಾಹ ಸಂಬಂಧಗಳು ಏರ್ಪಡುವುದಿಲ್ಲ. ಮಾದಿಗರ ಸಮುದಾಯದಲ್ಲಿ ಸಾಂಪ್ರದಾಯಿಕವಾಗಿ ನಡೆಯುವ ಮದುವೆಗಳು ಅವರವರ ಆರ್ಥಿಕ ಸ್ಥಿತಿಗತಿಗಳನ್ನು ಅವಲಂಬಿಸಿ ಒಂದು ದಿನ, ಐದು ದಿನಗಳ ಕಾಲ ವಿವಾಹದ ಆಚರಣೆಗಳು ನಡೆಯುತ್ತವೆ.

ಮಾದಿಗರಲ್ಲಿ ಸಹ ಕನ್ಯೆಯನ್ನು ನೋಡುವುದಕ್ಕೆ ಮುಂಚಿತವಾಗಿ ತತಮ್ಮ ಸಮುದಾಯದ ಹಿರಿಯ ವ್ಯಕ್ತಿಗಳೆಲ್ಲರೂ ಸೇರಿಕೊಂಡು ನಿರ್ಧಾರಕ್ಕೆ ಬರುತ್ತಾರೆ. ಈ ನಿರ್ಧಾರ ಕೈಗೊಂಡ ನಂತರ ಯಾವುದಾದರೂ ಒಂದು ದಿನ ನಿಗದಿಗೊಳಿಸಿ ಒಬ್ಬ ಮುತ್ತೈದೆಯೊಂದಿಗೆ ಐದು ಆರು ಜನ ಸೇರಿ ಕನ್ಯೆಯ ಮನೆಗೆ ಹೊರಡುತ್ತಾರೆ.

ನಂತರ ಹೆಣ್ಣಿನ ಮನೆಯಲ್ಲಿ ಇವರಿಗೆ ಆತಿಥ್ಯ ನಡೆಯುತ್ತದೆ. ವಧುವನ್ನು ನೋಡಿ ಮನೆಗೆ ಹೋಗಿ ಒಪ್ಪಿಗೆಯಾಗಿದ್ದಲ್ಲಿ ಒಪ್ಪಿಗೆ ಎಂದು ಹೇಳಿ ಕಳಿಸುತ್ತಾರೆ. ನಂತರ ಹೆಣ್ಣಿನ ಕಡೆಯವರು ಸಹ ವರನ ಮನೆ ನೋಡಲು ಅವರು ಸಹ ಬರುತ್ತಾರೆ. ಆಗ ಅವರು ನೋಡಿಕೊಂಡು ಹೋದ ತಕ್ಷಣ ಅವರು ಸಹ ಹೇಳಿಕಳಿಸುತ್ತಾರೆ.

**ಮಾತುಕತೆ ಮುಗಿಸುವುದು**

ಒಂದು ಶುಭದಿನದಲ್ಲಿ ವರನ ಕಡೆಯವರು ಕನ್ಯೆಯ ಮನೆಗೆ ಒಬ್ಬ ಮುತ್ತೈದೆ ಹೆಣ್ಣುಮಗಳೊಂದಿಗೆ ಐದು-ಆರು ಜನ ಸೇರಿ ಹೊರಡುತ್ತಾರೆ. ಕನ್ಯೆಯನ್ನು ನೋಡಿ ಮನೆಗೆ ಹೋಗಿ ಒಪ್ಪಿಗೆಯಾದಲ್ಲಿ ನೀವು ಬಂದು ಹುಡುಗನ ಮನೆತನವನ್ನು ನೋಡಿಕೊಂಡು ಹೋಗಿರಿ ಎಂದು ಹೇಳಿ ಕಳಿಸುತ್ತಾರೆ. ಅದರಂತೆಯೇ ಒಂದು ನಿಗದಿತ ದಿನದಂದು ಹೆಣ್ಣಿನ ಕಡೆಯವರು ಗಂಡಿನ ಮನೆತನ ನೋಡಲು ಬರುತ್ತಾರೆ. ವರನ ಗುಣ, ಶೀಲ, ಉದ್ಯೋಗ ಆಸ್ತಿ-ಪಾಸ್ತಿ ಇತರೆ ವಿಚಾರಗಳನ್ನು ಕುರಿತು ಕೂಲಂಕುಶವಾಗಿ ವಿಚಾರಿಸಿ ತಿಳಿದುಕೊಳ್ಳುತ್ತಾರೆ. ಪರಸ್ಪರ ಒಪ್ಪಿಗೆಯಾದರೆ ಮಾತುಕತೆಯು ನಡೆಯುತ್ತದೆ. ಒಪ್ಪಿಗೆಯಾಗದಿದ್ದರೆ ನಂತರ ತಿಳಿಸುವುದು ಆಗಿ ಹೇಳಿ ಸಂಬಂಧ ಬೇಡ ಎಂದು ಹೇಳಿಕಳಿಸುತ್ತಾರೆ. ಸಂಬಂಧ ಒಪ್ಪಿಗೆಯಾಗಿದ್ದರೆ, ಮಾತುಕತೆಗಾಗಿ ಒಂದು ದಿನವನ್ನು ಗೊತ್ತುಪಡಿಸಿ ಪೂರ್ವಭಾವಿಯಾಗಿ ತಿಳಿಸುತ್ತಾರೆ. ಹೆಣ್ಣಿನ ಮನೆಯಲ್ಲೇ ಮಾತುಕತೆ ನಡೆಯುತ್ತದೆ. ಮಾತುಕತೆಗೆ ಎರಡು ಕಡೆಯ ಹಿರಿಯರು ಮಧ್ಯಸ್ಥಿಕೆ ಹಾಗೂ ಮುಂದಾಳತ್ವ ಅತೀ ಮುಖ್ಯವಾಗಿರುತ್ತದೆ. ಮಾತುಕತೆಯ ದಿನದಂದು ಸಿಹಿ ಅಡುಗೆಮಾಡಿ ಊಟ ಮಾಡುತ್ತಾರೆ. ಮಾತುಕತೆ ಇತ್ಯರ್ಥವಾದರೆ ಊಟ ಮಾಡಲು ಅವಕಾಶವಿರುತ್ತದೆ. ಒಂದು ವೇಳೆ ಏನಾದರೂ ಮಾತುಕತೆ ಆಗದಿದ್ದರೆ ಊಟ ಮಾಡದೇ ಹಾಗೇ ತೆರಳುತ್ತಾರೆ. ಮದುವೆ ಕಾರ್ಯದ ಮುನ್ಸೂಚನೆ ಮೊದಲ ಹೆಜ್ಜೆಯಾಗಿಯೇ ಮಾತುಕತೆಯ ಕ್ರಮ ಮಹತ್ವವಾದದ್ದು ಎಂದು ಹೇಳಬಹುದು.

**ವೀಳ್ಯಶಾಸ್ತ್ರ ನಿಶ್ಚಿತಾರ್ಥ**

ಮಾದಿಗ ಸಮುದಾಯದಲ್ಲಿ ವಿವಾಹವಾಗುವುದಕ್ಕೆ ಮೊದಲು ನಿಶ್ಚಿತಾರ್ಥ ಮಾಡುವರು ವರನ ಊರಿನ ಹಿರಿಯರು ವಧುವಿನ ಮನೆಗೆ ಹೋಗುತ್ತಾರೆ. ವಧುವಿನ ಮನೆಯಲ್ಲಿ ಕರಿಕಂಬಳಿ ಹಾಸಿ ಗದ್ದಿಗೆಯನ್ನು ದೈವದ ಹಿರಿಯರನ್ನು ಕೂಡ್ರಿಸುತ್ತಾರೆ. ಅವರಿಗೆ ಎದುರು ಮುಖಮಾಡಿ ವಧುವನ್ನು ಕೂಡ್ರಿಸುತ್ತಾರೆ. ಇವರ ಮಧ್ಯದಲ್ಲಿ ಎಲೆ, ಅಡಿಕೆ, ಕುಂಕುಮ, ಅರಿಶಿಣ, ಅಕ್ಕಿ, ಆರತಿ ಮತ್ತು ಗದ್ದಿಗೆಯಲ್ಲಿ ೨॥ ಸೇರು ಅಕ್ಕಿಯನ್ನು ಆ ಗದ್ದಿಗೆಯ ಮೇಲೆ ಹಾಕಿರುತ್ತಾರೆ. ಈ ಸಂದರ್ಭದಲ್ಲಿ ವಧುವಿನ ಮನೆಯವರು ವರನ ಮನೆಯವರಿಗೆ ಆರತಿ ಮಾಡಿ ಮನೆಯೊಳಗೆ ಕಳಿಸುತ್ತಾರೆ. ಅಂದರೆ ಇಂಥವರ ಕನ್ಯೆಯನ್ನು ಇಂಥವರ ಕುಲದ ಗಂಡಿಗೆ ಕೊಡುತ್ತೇವೆ ಎಂದು ಹೇಳುತ್ತಾರೆ. ನಂತರ ಕನ್ಯೆಯ ಮನೆಯವರಿಗೆ ತಂದಿರುವ ವೀಳ್ಯವನ್ನು ವದುವಿನ ಹಿರಿಯ ವ್ಯಕ್ತಿ ವರನ ಹಿರಿಯ ವ್ಯಕ್ತಿ ಪರಸ್ಪರ ಬಾಯಿಯಲ್ಲಿ ಸಕ್ಕರೆ ಹಾಕಿಕೊಂಡು ಆ ದಿನವೇ ಕನ್ಯೆಯನ್ನು 'ಖಾಯಂ' ಮಾಡಿಕೊಂಡು ಮದುವೆಯ ದಿನವನ್ನು ನಿರ್ಧರಿಸುತ್ತಾರೆ. ಪರಸ್ಪರ ಸಕ್ಕರೆ ವಿನಿಯೋಗ ಮಾಡಿಕೊಳ್ಳುವಾಗ ಕನ್ಯೆಗೆ ಸಂಬಂಧಿಸಿದ ಹಿರಿಯ ವ್ಯಕ್ತಿ ವರನಿಗೆ ಸಂಬಂಧಸಿದ ವ್ಯಕ್ತಿಗೆ ಮೊದಲು ಊಟ ಕೊಡಬೇಕೆಂದು ಇವರ ಸಂಪ್ರದಾಯದಲ್ಲಿದೆ. ನಂತರ ಗಂಡಿನವರು ತಂದಿರುವ ವೀಳ್ಯವನ್ನು ಕನ್ಯೆಯ ಕುಲ ಸಂಬಂಧಿಕರೆಲ್ಲಾ ಸೇರಿ ಗಂಡಿನವರ ವೀಳ್ಯೆವನ್ನು ಸೇರಿನಿಂದ ಅಳತೆ ಮಾಡಿ ಅದನ್ನು ಕುಲಬಾಂಧವರಿಗೆಲ್ಲಾ ಕೊಟ್ಟು ಸಮನಾಗಿ ಹಂಚಿಕೊಳ್ಳುತ್ತಾರೆ. ನಂತರ ಮದುವೆಯ ಮುಹೂರ್ತಕ್ಕೆ ಅನುಮತಿಯನ್ನು ಕೊಡುತ್ತಾರೆ ಎಂದು ಹೇಳಬಹುದು.

**ಮದ್ಲಿಂಗನ ಶಾಸ್ತ್ರ**

ವೀಳ್ಯೆಶಾಸ್ತ್ರ ಮುಗಿದ ನಂತರ ಮಾರನೇ ದಿನ ಬೆಳಿಗ್ಗೆ "ಮದ್ಲಿಂಗನ" ಶಾಸ್ತ್ರವನ್ನು ಮಾಡುತ್ತಾರೆ. ಮದುವೆಯ ಗಂಡಿಗೆ ಅಥವಾ ಮದ್ಲಿಂಗನಿಗೆ ಮುತ್ತೈದೆ ಸಹೋದರಿಯರು ಇತರೆ ಮುತ್ತೈದೆಯರು ತಲೆಗೆ ಹೆಣ್ಣೆ ಮೈಗೆ ಅರಿಶಿಣ ಹಚ್ಚಿ ಕಳಸದಿಂದ ಆರತಿ ಬೆಳಗಿ ಮದ್ಲಿಂಗನನ್ನಾಗಿ ಮಾಡುತ್ತಾರೆ. ನಂತರ ಮದ್ಲಿಂಗನ ಕೊರಳಿಗೆ ಮಣಿಸರವನ್ನು ಹಾಕುತ್ತಾರೆ. ಕೈಗೆ ಚೂಪಾದ ಚಾಕನ್ನು ಕೊಡುತ್ತಾರೆ. ಆ ಚಾಕುವಿಗೆ ಕೆಂಪು ಬಟ್ಟೆಯನ್ನು ಸುತ್ತಿ ತುದಿಯಲ್ಲಿ ಒಂದು ನಿಂಬೆಹಣ್ಣನ್ನು ಚುಚ್ಚಿರುತ್ತಾರೆ. ನಂತರ ಮದ್ಲಿಂಗನ ತಲೆಗೆ ಪೇಟವನ್ನು ಸುತ್ತಿ ಹೆಗಲಿಗೆ ಒಂದು ಟವಾಲನ್ನು ಹಾಕಿ ಅದರಲ್ಲಿ ಒಂದು ಸೇರು ಅಕ್ಕಿಯನ್ನು ಹಾಕಿ ಅವನ ಹೆಗಲ ಮೇಲೆ ಇರುತ್ತದೆ. ನಂತರ ಮದ್ಲಿಂಗನನ್ನು

ಮಾಡಿಕೊಂಡು ದೇವರ ಪೂಜೆಗೆ ಕರೆದುಕೊಂಡು ಹೋಗುತ್ತಾರೆ. ಹಾಗೂ ಗಂಡು ಹೆಣ್ಣಿಗೆ ಪಸೆಯನ್ನು ಎರೆಯುತ್ತಾರೆ. ಗಂಡು ಹೆಣ್ಣಿನ ಹಸೆಗಳು ಬೇರೆ ಬೇರೆಯಾಗಿರುತ್ತವೆ. ಇದನ್ನು ವಧು-ವರರ ಸಂಬಂಧಿಗಳು ಕೂಡಿಕೊಂಡು ಹಸೆಯನ್ನು ಹಚ್ಚುತ್ತಾರೆ. "ಹಸೆ ಹಚ್ಚುವುದು ಎಂದರೆ ಕರಿಯ ಕಂಬಳಿಯನ್ನು ಗದ್ದುಗೆಯನ್ನಾಗಿ ಹಾಸಿ ಅದರ ಮೇಲೆ ತೆಳ್ಳಗೆ ಅಕ್ಕಿಯನ್ನು ಹರವಿ ಅದರಲ್ಲಿ ಬೆರಳಿನಿಂದ ಹಸೆಯನ್ನು ಬರೆಯುವುದು. ಇದರ ಮೇಲೆ ಒಂದು ಮಣೆಯನ್ನು ಹಾಕಿ ಅದರ ಮೇಲೆ ಒಂದು ಬಿಳಿ ಬಟ್ಟೆಯನ್ನು ಹಾಸುತ್ತಾರೆ. ಸುತ್ತಲೂ ಕರಿಯ ಕಂಬಳಿಯನ್ನು ಹಾಸುತ್ತಾರೆ. ಆ ಹಸೆಯ ಮೇಲೆ ಕಳಸವನ್ನು ಇಟ್ಟು ನಾಲ್ಕು ಮೂಲೆಗಳಲ್ಲಿ ಅಡಿಕೆ ಮತ್ತು ಎಲೆಯನ್ನು ಇಟ್ಟಿರುತ್ತಾರೆ ನಂತರ ಅದನ್ನು ಇಟ್ಟು ಗದ್ದಿಗೆ ಪೂಜೆಯನ್ನು ಮಾಡುತ್ತಾರೆ. ಇದನ್ನು ಹಸೆ ಎಂದು ಕರೆಯುತ್ತಾರೆ."[೬]

ಈ ಸಂಪ್ರದಾಯವು ಹೆಣ್ಣಿನ ಮನೆಯಲ್ಲೇ ನಡೆಯುತ್ತದೆ. ಧಾರೆಯರಿಯುವ ಕಾರ್ಯವೆಲ್ಲಾ ಹೆಣ್ಣಿನ ಮನೆಯಲ್ಲೇ ನಡೆಯುತ್ತದೆ. ವಧುವಿನವರು ಕೊಟ್ಟಂತಹ ಉಡುಗೊರೆಯನ್ನು ಮದ್ಲಿಂಗನು ಧರಿಸಿಕೊಂಡು ಹೆಣ್ಣಿನ ಮನೆಯ ಬಳಿಗೆ ವಾದ್ಯಸಮೇತ ಮದುವೆ ಮುಹೂರ್ತಕ್ಕೆ ಕರೆತರುತ್ತಾರೆ. ಆದರೆ ಈ ಮಾದಿಗ ಸಮುದಾಯದಲ್ಲಿ ತಾಳಿಕಟ್ಟುವುದಕ್ಕಿಂತ ಮುಂಚಿತವಾಗಿ ಮದ್ಲಿಂಗನನ್ನು ದೇವರ ಗುಡಿಗಳಿಗೆ ಕರೆದುಕೊಂಡು ಹೋಗಿ ದರ್ಶನವನ್ನು ಮಾಡಿಕೊಂಡು ಬಂದು ವಧುವಿನ ಅಂದರದಡಿಯಲ್ಲಿ ಬಂದು ನಿಂತುಕೊಳ್ಳುತ್ತಾನೆ. ಆಗ ತಾಳಿಶಾಸ್ತ್ರ ಪ್ರಾರಂಭವಾಗುತ್ತದೆ. ಊರಿನಲ್ಲಿ ಇರುವ ಹಿರಿಯರು ಸಂಬಂಧಿಕರು ಬಂಧು-ಬಳಗದವರು ಈ ಮುಹೂರ್ತಕ್ಕೆ ಬಂದಿರುತ್ತಾರೆ. ನಂತರ ಮಾಂಗಲ್ಯಧಾರಣೆ ನಡೆಯುತ್ತದೆ ಎಂದು ಹೇಳಬಹುದು. ಈ ಆಚರಣೆ ಕೆಲವೊಂದು ಸಮುದಾಯದಲ್ಲಿ ಕಂಡು ಬರುವುದಿಲ್ಲ. ನಂತರ ಮದುವೆಯ ಕಾರ್ಯ ನೆರವೇರಿಸಲು ಊರಿನ ಹಿರಿಯ ವ್ಯಕ್ತಿ ಬಂದು ತಾಳಿಯನ್ನು ಕಟ್ಟಿಸುತ್ತಾನೆ.

**ಅರಿವೇಣಿಗಳನ್ನು ಒತ್ತು ತರುವುದು**

ಮಾದಿಗರ ಸಮುದಾಯದಲ್ಲಿ ಅರಿಣಗಡಿಗೆ (ಅರಿವೇಣಿ)ಯನ್ನು ತರುವಂತಹ ಪದ್ಧತಿ ಇವರಲ್ಲಿತ್ತು. ಅಂದರೆ ಅರಿವೇಣಿಗಳನ್ನು ತರುವುದಕ್ಕಿಂತ ಮುಂಚಿತವಾಗಿ ನಮ್ಮ ಮದುವೆ ಅರಿವೇಣಿಗಳು ಬೇಕಾಗಿದ್ದಾವೆ ಆದ್ದರಿಂದ ನೀವು ನಮಗೆ ಅರಿವೇಣಿಗಳನ್ನು ಸಿದ್ದಮಾಡಿಕೊಡಬೇಕೆಂದು ಹೇಳುತ್ತಾರೆ. ಮದುವೆಯ ದಿನದಂದು ಕುಂಬಾರನ ಮನೆಗೆ ಹೋಗಿ ಅರಿವೇಣಿಯನ್ನು ಒಯ್ಯಲು ಬಂದವರು ಹನ್ನೆರಡು ಪಡಿ ಅಕ್ಕಿ, ಬೇಳೆ, ಬೆಲ್ಲದ ಮುದ್ದೆ ಎಲೆ ಅಡಿಕೆ ಅರಿಶಿಣ ಕುಂಕುಮವನ್ನು ಕುಂಬಾರನಿಗೆ ಕೊಟ್ಟು, ಅರಿವೇಣಿಗಳನ್ನು ವಾದ್ಯಗಳ ಮೂಲಕ ತರುವುದು. ಆತ ಅವನ್ನೆಲ್ಲ ಪಡೆದು ಅರಿವೇಣಿಗಳಿಗೆ ಪೂಜೆ ಮಾಡಿ ಒಪ್ಪಿಸುತ್ತಾನೆ. ಆಗ ಕೆಲವು ಹಾಡುಗಳನ್ನು ಹಾಡುತ್ತಾರೆ. ನಂತರ ಕುಂಬಾರನಿಂದ ಅರಿವೇಣಿ ಪಡೆದು ಅನ್ನ ಬೇಯಿಸುವ ಕುಡುಕೆಗಳನ್ನು ಗಂಗೆ ಉಪವಾಸದವರು, ಇನ್ನುಳಿದವನ್ನು ಇತರರು ಪಡೆದು ಹೊತ್ತುಕೊಂಡು ಬರುತ್ತಾರೆ. ಈ ಮಣ್ಣಿನ ಪಾತ್ರೆಗಳ ಮೇಲೆ ಬಣ್ಣ ಬಣ್ಣದ ಚಿತ್ತಾರಗಳನ್ನು ಬಿಡಿಸಲಾಗಿರುತ್ತದೆ. ಇದನ್ನು ಕುಂಬಾರನು ಉಪವಾಸ ವ್ರತವನ್ನು ಮಾಡಿ ಸಿದ್ದಪಡಿಸಿರುತ್ತಾನೆ. ಆಗ ಕುಂಬಾರನಿಗೆ ಇವರು ೧೨ ಪಡಿ ಅಕ್ಕಿ, ೧೨ ಅರಿಶಿಣಕೊಂಬು, ೧೨ ಅಡಿಕೆ, ೧೨ ಎಲೆ, ೧೨ ಹಚ್ಚು ಬೆಲ್ಲ ಕೊಟ್ಟು ಕುಂಬಾರನು ೧೨ ಅರಿವೇಣಿಗಳನ್ನು ಮತ್ತು ೧೨ ಮುಚ್ಚುಳಿಕೆಗಳನ್ನು ಕೊಟ್ಟು ಕಳಿಸುತ್ತಾನೆ.

ಹೀಗೆ ಅರಿವೇಣಿಗಳನ್ನು ಹೊತ್ತು ತರಲು ಹೋಗುವಾಗ ಮತ್ತು ಬರುವಾಗ ಹಾಡುಗಳನ್ನು ಹಾಡುತ್ತಾರೆ.

"ಕುಂಬಾರ ಕುಂಬಾರ ಓರೆ ಕುಂಬಾರ
ನಿಮ್ಮನೆಯ ಅರಿವೇಣಿ ನಮಗೆ ಕೊಡಬೇಕು
ನಿಮ್ಮನೆಯ ಅರಿವೇಣಿ ನಮಗೆ ಕೊಡಬೇಕು
ಅರಿಶಿಣ ಕುಂಕುಮವ ಪಡೆಯಬೇಕು
ಬೆಳ್ಳಕ್ಕಿ ಬೆಲ್ಲದ ಮುದ್ದೆ ಪಡೆಯಲೇ ಬೇಕು"[೭]

**ಅರಿವೇಣಿ ಪೂಜೆ**

ಕುಂಬಾರನ ಮನೆಯಿಂದ ಹೊತ್ತು ತಂದ ಅರಿವೇಣಿಗಳನ್ನು ಚಪ್ಪರದ ಮನೆಯಲ್ಲಿ ಸ್ಥಾಪನೆ ಮಾಡುತ್ತಾರೆ. ಸ್ಥಾಪಿಸುವುದಕ್ಕಿಂತ ಮೊದಲು ಅವುಗಳನ್ನು ಇಡುವ ಜಾಗದಲ್ಲಿ ತವಡು ಅಥವಾ ಮೇಕೆಯ ಪಿಚ್ಚಿಗೆ ಸಗಣಿ

ಅಥವಾ ಗೊಬ್ಬರ ಹಾಕಿ ಅದರ ಮೇಲೆ ಅರಿವೇಣಿಗಳನ್ನು ಇಡುತ್ತಾರೆ. ನಂತರ ಆ ಹರವಿಯ ಮೇಲೆ ಮುಚ್ಚಳವನ್ನು ಮುಚ್ಚುತ್ತಾರೆ. ಆಗ ಆ ಅರಿವೇಣಿಗೆ ಮಾತ್ರ ಅಕ್ಕಿ, ಕೊಬ್ಬರಿ, ಉತ್ತತ್ತಿ, ಎಲೆ, ಅಡಿಕೆ, ಅರಿಶಿಣಕೊಂಬು ಮುಂತಾದವುಗಳನ್ನು ಆ ಅರಿವೇಣಿಯ ಮೇಲ್ಭಾಗದಲ್ಲಿ ಒಂದು ಕಟ್ಟಿಗೆಯನ್ನು ಜೋಡಿಸಿ ಆ ಕಟ್ಟಿಗೆಗೆ ಕಟ್ಟುತ್ತಾರೆ. ತದನಂತರ ಈ ನಾಲ್ಕು ಅರಿವೇಣಿಗಳಿಗೆ ಮುಚ್ಚಳಗಳಿಗೆ ಎಣ್ಣೆ ಸುರಿದು ಬತ್ತಿ ಹೊಸೆದು ಬೆಳಗಿ ಪೂಜಿಸುತ್ತಾರೆ. ಈ ಜ್ಯೋತಿಗಳು ಮುಹೂರ್ತ ಮುಗಿಯುವವರೆಗೆ ಯಾವ ಕಾರಣಕ್ಕೂ ಆರುವುದಿಲ್ಲ ಹಿರಿಯರ ಅಭಿಪ್ರಾಯವಾಗಿದೆ.

**ತಾಳಿಶಾಸ್ತ್ರ**

ಮಾದಿಗ ಸಮುದಾಯದಲ್ಲಿ ತಾಳಿಕಟ್ಟುವ ಸಂದರ್ಭದಲ್ಲಿ ಬಂಡಾರದವರಲ್ಲಿ ಇರುವಂತಹ ಕುಲ ಗೋತ್ರದವರನ್ನು ಕರೆಯಿಸಿ ಅವರ ಸಮ್ಮುಕದಲ್ಲಿಯೇ ಮಾಂಗಲ್ಯಧಾರಣೆ ನಡೆಯುತ್ತದೆ. ಮುಹೂರ್ತದಲ್ಲಿ ಗಂಡು ಹೆಣ್ಣನ್ನು ಅಭಿಮುಖವಾಗಿ ನಿಲ್ಲಿಸಿ ಹಾಲುಡಿ ತುಂಬಿದ ತಂಬಿಗೆಯನ್ನು ಇಟ್ಟು ಮತ್ತು ತಂಬಿಗೆಯ ಮೇಲೆ ತೆಂಗಿನ ಕಾಯಿಯನ್ನು ಇಟ್ಟಿರುತ್ತಾರೆ. ನಂತರ ಅದಕ್ಕೆ ಪೂಜೆ ಮಾಡಿ ಐದಾರು ಜನರ ಹತ್ತಿರ ದರ್ಶನ ಪಡೆದು ವಧುವಿನ ಕೊರಳಿಗೆ ವರನು ತಾಳಿಯನ್ನು ಕಟ್ಟುತ್ತಾನೆ. ನಂತರ ಕುಲದ ಸಂಬಂಧಿಕರು ಮತ್ತು ಮದುವೆಗೆ ಆಗಮಿಸಿದವರು ತಮ್ಮ ಎರಡು ಕೈಗಳಿಂದ ಹಾಲನ್ನು ಮುಟ್ಟಿ ಆಶಿರ್ವಾದ ಮಾಡುತ್ತಾರೆ. ನಂತರ ತಾಳಿಕಟ್ಟಲು ಯಜಮಾನರ ಅಪ್ಪಣೆ ಪಡೆದು ವಧುವಿಗೆ ವರನು ತಾಳಿಕಟ್ಟುತ್ತಾನೆ. ಮದುವೆಗೆ ಬಂದಿರುವ ಬಂಧುಬಾಂಧವರು, ಬಳಗದವರು ಅಕ್ಷತೆ ಹಾಕಿ ನಂತರ ತಂದಿರುವ ಉಡುಗೊರೆಯನ್ನು ಕೊಟ್ಟು ಊಟಮಾಡಿಕೊಂಡು ತಮ್ಮ ತಮ್ಮ ಊರುಗಳಿಗೆ ಹೊರಡುತ್ತಾರೆ. ಅದೇ ದಿನ ರಾತ್ರಿ ಊರಿನಲ್ಲಿ ನವದಂಪತಿಗಳ ಮೆರವಣಿಗೆಯನ್ನು ಮಾಡುತ್ತಾರೆ.

"ಗಂಡು ಹೆಣ್ಣಿಗೆ ತಾಳಿಯನ್ನು ಕಟ್ಟುವಾಗ ಸೂರ್ಯ-ಚಂದ್ರರ ಸಾಕ್ಷಿಯಾಗಿ ಗುರು-ಹಿರಿಯರ ಪಾದಸಾಕ್ಷಿಯಾಗಿ ನಮ್ಮ ತಂದೆ-ತಾಯಿ ಪಾದಸಾಕ್ಷಿಯಾಗಿ ನಾನೇ ಗಂಡ ನೀನೆ ಹೆಂಡತಿ ಎಂದು ಗಂಡು ಹೇಳುತ್ತಾನೆ. ಹಾಗೆಯೇ ಸೂರ್ಯ-ಚಂದ್ರರ ಸಾಕ್ಷಿಯಾಗಿ ಗುರು-ಹಿರಿಯರ ಸಾಕ್ಷಿಯಾಗಿ ನಮ್ಮ ತಂದೆ-ತಾಯಿಯ ಪಾದಸಾಕ್ಷಿಯಾಗಿ ನೀನೇ ಗಂಡ ನಾನೇ ಹೆಂಡತಿ ಎಂದು ಹೇಳುತ್ತಾಳೆ"[೮]

**ಮನೆತುಂಬಿಸಿಕೊಳ್ಳುವುದು**

ತಾಳಿಶಾಸ್ತ್ರ ಮುಗಿದ ನಂತರ ವಧುವನ್ನು ವರನ ಮನೆಗೆ ಕರೆದುಕೊಂಡು ಹೋಗುತ್ತಾರೆ. ವರನ ಮನೆಯಲ್ಲಿ ಮನೆತುಂಬಿಸಿಕೊಳ್ಳುವ ಶಾಸ್ತ್ರವನ್ನು ಮಾಡುತ್ತಾರೆ. ವಧು-ವರರನ್ನು ಮನೆಯೊಳಗೆ ಕರೆದುಕೊಳ್ಳುವುದಕ್ಕಿಂತ ಮುಂಚಿತವಾಗಿ ವರನ ಕೈಯಲ್ಲಿ ಬಾರುಕೋಲು ಮತ್ತು ನಗ ಇರುತ್ತದೆ. ನಂತರ ವಧುವಿನ ಕೈಯಲ್ಲಿ ಕುಡುಗೋಲು ಮತ್ತು ಕಳೆತೆಗೆಯುವ ಗುದ್ದಲಿಗಳು ಅವಳ ಕೈಯಲ್ಲಿ ಇರುತ್ತದೆ. ಏಕೆಂದರೆ ಈ ಸಮುದಾಯದಲ್ಲಿ ಹೆಚ್ಚಾಗಿ ಕೂಲಿಯನ್ನೇ ತಮ್ಮ ಕಸುಬನ್ನಾಗಿ ಮಾಡಿಕೊಂಡು ಜೀವನ ಸಾಗಿಸುತ್ತಾರೆ. ಆದ್ದರಿಂದ ತಮ್ಮ ಕುಲದ ಮೂಲ ವೃತ್ತಿ ವ್ಯವಸಾಯ ಆಗಿರುವುದರಿಂದ ವರನ ಕೈಯಲ್ಲಿ ಕೂರಿಗೆ, ಬಟ್ಲು, ಹಗ್ಗ ಮತ್ತು ವಧುವಿನ ಕೈಯಲ್ಲಿ ಕುಡುಗೋಲು ಕೊಡುವ ಸಂಪ್ರದಾಯ ಇವರಲ್ಲಿ ಕಾಣಬಹುದಾಗಿದೆ. ಹೆಣ್ಣು ಪಶುಪಾಲನೆಯಿಂದ ಆದಾಯವನ್ನು ಹೇಗೆ ಸಂಪಾದಿಸಬೇಕು ಎಂಬುದು ಸಾಂಕೇತಿಕ ಚಿತ್ರಣ ಇಲ್ಲಿ ಕಾಣಬಹುದಾಗಿದೆ.

ವ್ಯವಸಾಯವೇ ಇಂದಿಗೂ ಈ ಸಮುದಾಯದಲ್ಲಿ ಪ್ರಮುಖ ವೃತ್ತಿಯಾಗಿರುವುದು ಕಂಡುಬರುತ್ತದೆ. ಹೀಗಾಗಿ ಪ್ರತಿಯೊಂದು ಮನೆಯಲ್ಲಿ ಒಂದು ಅಥವಾ ಎರಡು ಹಸುಗಳನ್ನು ಅಥವಾ ಎರಡು ಎಮ್ಮೆಗಳನ್ನು ಇವರು ಕಟ್ಟಿಕೊಳ್ಳುತ್ತಿದ್ದರು. ಇದರಿಂದ ಅವರ ಮನಯಲ್ಲಿ ಹಾಲು, ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ ಯಾವಾಗಲೂ ಇದ್ದೇ ಇರುತ್ತದೆ. ನಂತರ ವಧು-ವರರು ಕೂರಿಗೆ ಬಟ್ಲು ಮತ್ತು ಕುಡುಗೋಲು ಕೈಯಲ್ಲಿ ಹಿಡಿದುಕೊಂಡು ನಾವು ಒಕ್ಕಲುತನ ಮಾಡುತ್ತೇವೆ ನಮ್ಮಿಂದ ಹುಟ್ಟುವಂತಹ ಮಕ್ಕಳಿಗೆ ಮತ್ತು ನಮ್ಮನ್ನೇ ನಂಬಿರುವವರಿಗೆ ಅನ್ನವನ್ನು ಕೊಡುತ್ತೇವೆ ಎಂದು ಹೇಳಿ ಮನೆಯ ಪಕ್ಕದಲ್ಲಿ ಹೊಲದಲ್ಲಿ ಬಿತ್ತುವಂತೆ ಉಳುಮೆಮಾಡಿ ಅದರಲ್ಲಿ ಗಂಡ ಹೆಂಡತಿ ತಂದಿರುವ ಕಡಲೇಕಾಯಿ ಮತ್ತು ಸಜ್ಜೆಯನ್ನು ಬಿತ್ತನೆ ಮಾಡಿ ಬೆಳೆಯನ್ನು ಬೆಳೆದು, ನಂತರ ಕೊಯ್ಯುವ ಸಾಂಕೇತಿಕ ಸಂಪ್ರಾದಯ ನಡೆಯುತ್ತದೆ.

ನಂತರ ವಧು-ವರರನ್ನು ಮನೆಯ ಹೊಸ್ತಿಲ ಮೇಲೆ ವಧುವಿನ ಪಾದದ ಮಧ್ಯೆ ವರನ ಪಾದವನ್ನು ಇಟ್ಟು, ಇಬ್ಬರ ಪಾದಗಳ ಮಧ್ಯ ಮೊಳೆಯೊಡೆಯುತ್ತಾರೆ. ಈ ಸಂದರ್ಭದಲ್ಲಿ ವರನ ಸಹೋದರಿ ಅಣ್ಣನ ಕಾಲನ್ನು ಹಿಡಿದುಕೊಳ್ಳುತ್ತಾಳೆ. ಆಗ ವರನು ಕಾಲನ್ನು ಹಿಡಿದುಕೊಂಡ ಸಹೋದರಿಗೆ ನಿಮಗೆ ಏನುಬೇಕು ಎಂದು ಕೇಳುತ್ತಾನೆ. ಆಗ ಅವರು ನಿಮಗೆ ಹುಟ್ಟುವ ಮಗು ಹೆಣ್ಣಾಗಲಿ ಅಥವಾ ಗಂಡಾಗಲೀ ನನ್ನ ಮಗ ಅಥವಾ ನನ್ನ ಮಗಳಿಗೆ ಕೊಡಬೇಕು ಎಂದು ಹೇಳುತ್ತಾಳೆ. ವರನು ಕಾಲನ್ನು ಹಿಡಿದ ಸಹೋದರಿಗೆ ಭಾಷೆಕೊಟ್ಟು, ಹಾಗೆಯೇ ಆಗಲಿ ಎಂದು ಹೇಳುತ್ತಾನೆ. ಆಗ ಅವಳು ಕಾಲನ್ನು ಬಿಡುತ್ತಾಳೆ. ನಂತರ ವಧು-ವರರನ್ನು ಮನೆಯ ಒಳಗಡೆ ಕರೆದುಕೊಂಡು ಅವರಿಂದ ದೇವರಿಗೆ ದೀಪ ಹಚ್ಚುತ್ತಾರೆ (ಹಚ್ಚಿಸುತ್ತಾರೆ).

**ಗಂಗೆಪೂಜೆಶಾಸ್ತ್ರ**

ತಾಳಿಶಾಸ್ತ್ರ ಮುಗಿದ ಮಾರನೇ ದಿನ ವಧುವರರನ್ನು ಮನೆದುಂಬಿಸಿ ನಂತರ ಊರ ಸಮೀಪದ ಕೆರೆ-ಬಾವಿ ಅಥವಾ ಹೊಳೆಗೆ ಕರೆದುಕೊಂಡು ಹೋಗಿ ಪೂಜೆಯನ್ನು ಸಲ್ಲಿಸುತ್ತಾರೆ. ನಂತರ ತುಂಬಿದ ಕೊಡವನ್ನು ವಧುವಿನ ತಲೆಯ ಮೇಲೆ ಹೊರಸಿಕೊಂಡು ತರಲಾಗುತ್ತದೆ. ಆಗ ವರನು ತನ್ನ ಮನೆಯ ಬಾಗಿಲಲ್ಲಿ ನಿಂತುಕೊಂಡು ತುಂಬಿದ ಕೊಡವನ್ನು ಪೂಜಿಸಿ ವಧುವನ್ನು ಒಳಗಡೆ ಕರೆದುಕೊಳ್ಳುವುದಕ್ಕಿಂತ ಮುಂಚಿತವಾಗಿ ತಮ್ಮ ಗಂಡನ ಹೆಸರನ್ನು ಕೇಳುತ್ತಾರೆ. ಆಗ ಹೆಸರು ಹೇಳಿದ ಮೇಲೆ ಒಳಗಡೆ ಕರೆದುಕೊಳ್ಳುತ್ತಾನೆ.

ಇತ್ತೀಚಿಗೆ ನಾಗರೀಕ ಪ್ರಭಾವದಿಂದ ಇಂದು ಸ್ವಲ್ಪ ಪ್ರಮಾಣದಲ್ಲಿ ಮದುವೆಯಲ್ಲಿ ಆಚರಿಸುವ ಸಂಪ್ರದಾಯಗಳನ್ನು ಕಡಿಮೆಯಾಗಿವೆ. ಹಿಂದೆ ಐದು ಆರು ದಿನಗಳ ಕಾಲ ನಡೆಯುವಂತಹ ಮದುವೆಯ ಆಚರಣೆ ಸಂಪ್ರದಾಯಗಳು ಇಂದು ಎರಡು ಮೂರು ದಿನಗಳಲ್ಲೇ ಮದುವೆಯ ಕಾರ್ಯಗಳನ್ನು ಮಾಡಿ ಮುಗಿಸುತ್ತಾರೆ. ಮಾದಿಗರ ಸಂಪ್ರದಾಯದಲ್ಲಿ ಇವರದೇ ಆದಂತಹ ಕೇರಿಗಳು ಇದ್ದು ತಮ್ಮದೇ ಆದಂತಹ ಕೂಲಿ ಮತ್ತು ವ್ಯವಸಾಯವನ್ನು ಮಾಡುತ್ತಾ ಜೀವನವನ್ನು ಸಾಗಿಸುತ್ತಿದ್ದಾರೆ. ಹೊಲೆಯರು ಮತ್ತು ಮಾದಿಗರು ತಮ್ಮ ಸಮುದಾಯಗಳೊಂದಿಗೆ ಸಹಕಾರ ಭಾವನೆಯಿಂದ ಜೀವನ ನಡೆಸುತ್ತಾ ತಮ್ಮ ಪಾರಂಪರಿಕವಾಗಿ ಮದುವೆಯ ಸಂಪ್ರದಾಯಗಳು ಆಚಾರ-ವಿಚಾರಗಳನ್ನು ಉಳಿಸಿಕೊಂಡು ಬಂದಿದ್ದಾರೆ.

ನಂತರ ನಗರದಲ್ಲಿ ಉದ್ಯೋಗ ಮಾಡುತ್ತಾ ಜೀವನ ಸಾಗಿಸುವ ಈ ಸಮುದಾಯದ ಜನರ ಆಚಾರ-ವಿಚಾರ ಸಂಪ್ರದಾಯಗಳ ಮೇಲೆ ಅಲ್ಪ ಸ್ವಲ್ಪ ಬದಲಾವಣೆ ಹೊಂದಿರುವುದು ಕಂಡುಬರುತ್ತದೆ.

**೪.೧.೭. ಶವಸಂಸ್ಕಾರ**

ಹುಟ್ಟಿದ ವ್ಯಕ್ತಿಗೆ ಸಾವು ಸಹಜ. ಅದು ಪ್ರಕೃತಿಯ ನಿಯಮವಾಗಿದೆ ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಸಾವಿನ ನಂತರ ಪ್ರತಿಯೊಂದು ಬುಡಕಟ್ಟುಗಳಲ್ಲಿ ಇತರೆ ಸಮುದಾಯಗಳಲ್ಲಿ ಸೂತಕ, ವಿಧಿ ಕರ್ಮಗಳನ್ನು ಸತ್ತವ್ಯಕ್ತಿಯ ಆತ್ಮಕ್ಕೆ ಶಾಂತಿಸಿಗಲೆಂದು ಕೈಗೊಳ್ಳುತ್ತಾರೆ.

ಮಾದಿಗರ ಸಮುದಾಯದಲ್ಲಿಯೂ ಸಹ ಸಾವಿನ ನಂತರ ಅನೇಕ ವಿಧಿಕರ್ಮಗಳನ್ನು ಆಚರಿಸುತ್ತಾರೆ. ಈ ಸಮುದಾಯದಲ್ಲಿ ರೋಗದಿಂದ ಬಳಲುತ್ತಿದ್ದರೆ ಅಥವಾ ವಯಸ್ಸಾಗಿ ನಿಶ್ಯಕ್ತಿಯಾಗಿ ಸಾಯುವ ಸ್ಥಿತಿಯಲ್ಲಿದ್ದರೆ ಅಂತಹ ಸಮಯದಲ್ಲಿ ವ್ಯಕ್ತಿಯ ಸಂಬಂಧಿಕರಿಗೆ ಹೇಳಿಕಳುಹಿಸುತ್ತಾರೆ. ಅವರೆಲ್ಲಾರು ಬಂದ ನಂತರ ಸಾವಿನಂಚಿನಲ್ಲಿರುವ ವ್ಯಕ್ತಿಯನ್ನು ಮನೆಯ ಹೊರಭಾಗಕ್ಕೆ ತಂದು ಮಲಗಿಸುತ್ತಾರೆ. ಸಾವಿನಂಚಿನಲ್ಲಿರುವ ವ್ಯಕ್ತಿಗೆ ಅತೀ ಇಷ್ಟವಾದರ ಒಬ್ಬರಿಂದ ಬಾಯಿಯೊಳಗೆ ನೀರನ್ನು ಹಾಯಿಸುತ್ತಾರೆ. ಜೀವ ಹೋದ ತಕ್ಷಣ ಆ ಕೇರಿಯ ಹಿರಿಯರೆಲ್ಲಾರು ಸೇರಿ ಸಂಬಂಧಪಟ್ಟ ಬೀಗರಿಗೆ ಕುಲಬಾಂದವರಿಗೆ ಹೇಳಿ ಕಳುಹಿಸುತ್ತಾರೆ. ಸಂಬಂಧಿಕರು ಎಷ್ಟೇ ದೂರವಿದ್ದರೂ ಸಾವಿನ ಸುದ್ದಿ ಮುಟ್ಟಿಸಲು ಅವರ ಜಾತಿಯಲ್ಲೇ ಅಂದರೆ ಆ ಕೇರಿಯಲ್ಲಿ ಇರುವಂತಹ ಯಜಮಾನರನ್ನು ಹೇಳಿ ಕಳುಹಿಸುತ್ತಿದ್ದರು.

ಸಾವಿನ ಸುದ್ದಿ ಕೇಳಿದ ಕೂಡಲೇ ಊರಿನಲ್ಲಿ ಇರುವ ಕುಲಸ್ಥರು ಸತ್ತವರ ಮನೆಯ ಮುಂದೆ ಬಂದು ಸೇರುತ್ತಾರೆ. ಆ ಕೇರಿಯಲ್ಲಿ ಇರುವಂತಹ ಹೆಣ್ಣುಮಕ್ಕಳು ಆ ಮನೆಗೆ ಮುದ್ದೆ, ಅನ್ನ, ಸಾಂಬಾರು, ಆಹಾರವನ್ನು ತೆಗೆದುಕೊಂಡು ಹೋಗಿ ಆ ಜನಗಳಿಗೆ ಉಣಿಸುತ್ತಿದ್ದರು. ನಂತರ ಬೀಗರು ಎಲ್ಲಾರು ಬಂದು ಸೇರಿದಾಕ್ಷಣ ಸ್ಮಶಾನಕ್ಕೆ

ತೆಗೆದುಕೊಂಡು ಹೋಗಲು ಸಿದ್ಧತೆಯನ್ನು ಮಾಡಿಕೊಳ್ಳುತ್ತಾರೆ. ಈ ಸಮುದಾಯದಲ್ಲಿ ಹಿರಿಯ ವ್ಯಕ್ತಿಗಳು ಅಂದರೆ ಯಜಮಾನರು ಶವಕ್ಕೆ ಬೇಕಾಗುವಂತಹ ಹೂವಿನಹಾರ, ಮೂರು ಅಥವಾ ನಾಲ್ಕು ಮೊಳ ಬಿಳಿಬಟ್ಟೆ, ಹೊಸ ಮಣ್ಣಿನ ಮಡಿಕೆ, ಪೂಜಾಸಾಮಾಗ್ರಿಗಳನ್ನು ತರುತ್ತಾರೆ. ನಂತರ ಶವಕ್ಕೆ ಸ್ನಾನಮಾಡಿಸಿ ಶವವನ್ನು ಮಲಗಿಸುತ್ತಾರೆ. ಹೊಸ ಬಳಿಯ ಬಟ್ಟೆಯನ್ನು ತಲೆಯಿಂದ ಕಾಲಿನವರೆಗೆ ಮುಚ್ಚಿ ಉರಿಕೋಸೆಯಿಂದ ಕಟ್ಟುತ್ತಾರೆ. ಎರಡು ಕಳ್ಳಿ ಕಟ್ಟಿಗೆಯನ್ನು ಮಾಡಿ ಅದರ ಮೇಲೆ ಶವವನ್ನು ಮಲಗಿಸುತ್ತಾರೆ. ಶವಸಂಸ್ಕಾರದಲ್ಲಿ ಪಾಲ್ಗೊಳ್ಳಲು ಆಗಮಿಸಿರುವ ಎಲ್ಲಾ ಸಂಬಂಧಿಕರು ಸತ್ತ ವ್ಯಕ್ತಿಗೆ ಅಂತಿಮ ಪೂಜೆಮಾಡಿ ಕೊರಳಿಗೆ ಹೂವಿನ ಹಾರವನ್ನು ಹಾಕಿ, ಮನೆಯ ಮುಂದೆ ಸಗಣಿ ಕುಳ್ಳುಗಳನ್ನು ತಂದು ಹೊಗೆ ಹಾಕುತ್ತಾರೆ. ಆ ಹೊಗೆಯನ್ನು ನೋಡಿದ ತಕ್ಷಣ ಆ ಮನೆಯಲ್ಲಿ ಯಾರೋ ಸತ್ತಿದ್ದಾರೆ ಎಂಬ ಭಾವನೆ ಜನರಲ್ಲಿ ಮೂಡಿಬರುತ್ತದೆ.

ಮನೆಯ ಮುಂದೆ ಒಂದು ಬದಿಯಲ್ಲಿ ಹೊಸಗಡಿಗೆಯಲ್ಲಿ ಮೂರುಪಾವು ಅಕ್ಕಿ ಹಾಕಿ ಅನ್ನವನ್ನು ಬೇಯಿಸುತ್ತಾರೆ. ಆ ಸಮಯಕ್ಕಾಗಲೇ ಸ್ಮಶಾನದಲ್ಲಿ ಊಳುವ ಜಾಗವನ್ನು ಗುರುತಿಸಿ ಅದೇ ಸಮುದಾಯದವರು ಕುಣಿತೆಗೆಯುವ ಕಾರ್ಯನಿರ್ವಹಿಸುತ್ತಾರೆ. ಶವಸಂಸ್ಕಾರ ಮುಗಿಯುವವರೆಗೆ ಸಾವಿನ ಮನೆಯಲ್ಲಿ ಸಗಣಿ ತೆಗೆಯುವ, ಕಸ ಗೂಡಿಸುವ ಅಥವಾ ಅಡುಗೆ ಮಾಡುವ ಯಾವ ಕಾರ್ಯಗಳನ್ನು ಮಾಡುವಂತಿಲ್ಲ. ಎಲ್ಲರೂ ಸುಮ್ಮನೆ ಕುಳಿತುಕೊಂಡಿರುತ್ತಾರೆ. ಅಕ್ಕಪಕ್ಕದ ಮನೆಯವರು ಸಾವಿನ ಕುಟುಂಬದ ಸದಸ್ಯರಿಗೆ ಕಾಫಿ, ತಿಂಡಿ-ತಿನಿಸುಗಳನ್ನು ಕೊಡುತ್ತಾರೆ.

ಶವವನ್ನು ಮಲಗಿಸಿದ ಸ್ಥಳದಲ್ಲಿ ಒಂದು ಕುಂಬವನ್ನು ಇಡುತ್ತಾರೆ. ಶವಸಂಸ್ಕಾರಕ್ಕೆ ಆಗಮಿಸಿದವರು ಅದಕ್ಕೆ ಪೂಜೆ ಮಾಡಿ ತೆಂಗಿನಕಾಯಿಯನ್ನು ಒಡೆಯುತ್ತಾರೆ. ವಿವಾಹಿತ ಸತ್ತರೆ ಆತನ ಹೆಂಡತಿ ಎಡಭಾಗದಲ್ಲಿ ಕುಳಿತುಕೊಂಡಿರುತ್ತಾಳೆ. ಅವಲು ಹುಟ್ಟಿರುವಂತಹ ಸೀರೆ ಸೆರಗಿನಿಂದ ತುಂಬ ಹೊದ್ದುಕೊಂಡಿರುತ್ತಾಳೆ. ಈ ಸಂದರ್ಭದಲ್ಲಿ ತವರು ಮನೆಯವರು ಮಡ್ಲಕ್ಕಿ ಮತ್ತು ಸೀರೆಯನ್ನು ತಂದಿರುತ್ತಾರೆ. ಅವಳಿಗೆ ಹೊಸ ಸೀರೆಯನ್ನು ತೊಡಿಸಿ ಅಕ್ಕಿ ಹಾಕಿ ಪೂಜೆ ಮಾಡುತ್ತಾರೆ. ನಂತರ ಚಟ್ಟಕಟ್ಟಿ ಶವವನ್ನು ಅದರಲ್ಲಿ ಮಲಗಿಸುತ್ತಾರೆ. ನಂತರ "ಶವದ ಮೇಲೆ ಬಿಳಿಯ ಹೊಸ ಬಟ್ಟೆಯನ್ನು ಹಾಕಿ ಭದ್ರವಾಗಿ ಕಟ್ಟಿದ ಮೇಲೆ ಶವದ ಯಾತ್ರೆ ಪ್ರಾರಂಭವಾಗುತ್ತದೆ. ಶವದ ಮುಂದೆ ಹಿಂಡೆಕೂಳನ್ನು ತೆಳುಹಗ್ಗದಿಂದ ಕಟ್ಟಿಕೊಂಡು ಹಿರಿಯ ಮಗ ಅಥವಾ ಕೊನೆಯ ಮಗ ಅದನ್ನು ಹಿಡಿದುಕೊಂಡು ಮುಂದೆ ಸಾಗುತ್ತಾನೆ. ಸ್ಮಶಾನ ಅರ್ಧದಾರಿಗೆ ಹೋದಮೇಲೆ ದಾರಿಯಲ್ಲಿನ ತಂಗಡಿ ಗಿಡ ಇಲ್ಲದೆ ಯಾವುದಾದರೊಂದು ಹಸಿರು ಗಿಡದಲ್ಲಿ ಹಿಂಡೆಕೂಳನ್ನು ಇಡುತ್ತಾರೆ. ಆಗ ಹೆಣ ಹೊತ್ತವರು ಹಿಂದು ಮುಂದಾಗುತ್ತಾರೆ."[೯] ಅಲ್ಲಿಯೇ ಅನ್ನದ ಗಡಿಗೆಯನ್ನು ಹೊಡೆದು ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಾರೆ.

ನಂತರ ಶವವನ್ನು ಕುಣಿಯ ಒಳಗಡೆ ಇಟ್ಟು ಪ್ರತಿಯೊಬ್ಬರು ಕಲ್ಲು ಮತ್ತು ಇನ್ನು ಕೆಲವರು ತಂಗಡಿಸೊಪ್ಪನ್ನು ಕುಣಿಯೊಳಗೆ ಹಾಕಿ ಒಂದೊಂದು ಹಿಡಿ ಮಣ್ಣನ್ನು ಹಾಕುತ್ತಾರೆ. ಸತ್ತವನು ವಿವಾಹಿತನಾದರೆ ಅವನ ಹೆಂಡತಿ ಇದ್ದರೆ ಅಲ್ಲಿಯೇ ಬಳೆ ತೆಗೆಯುವ ಕಾರ್ಯ ನಡೆಯುತ್ತದೆ. ಅವಳು ತೊಟ್ಟ ಬಳೆ ಹೂವು ಕುಂಕುಮ ಮತ್ತು ಆಭರಣಗಳನ್ನು ತೆಗೆದು ಅವಳನ್ನು ವಿಧವಿಯನ್ನಾಗಿಸುತ್ತಾರೆ. ಮಡ್ಲಕ್ಕಿಯಲ್ಲಿರುವ ಅಕ್ಕಿಯನ್ನು ಕುಣಿಯೊಳಗೆ ಹಾಕಿಸುತ್ತಾರೆ. ಆ ಕೇರಿಯ ಹಿರಿಯ ಹೆಂಗಸರು ಈ ಕಾರ್ಯವನ್ನು ನೆರವೇರಿಸುತ್ತಾರೆ. ನಂತರ ವಿಧವಿಯನ್ನು ಮನೆಗೆ ಕರೆದುಕೊಂಡು ಬರುತ್ತಾರೆ. ಸ್ಮಶಾನಕ್ಕೆ ಬಂದಿರುವ ಜನರೆಲ್ಲರೂ ಕೆರೆ ಅಥವಾ ಬಾವಿಗಳಿಗೆ ಹೋಗಿ ನೀರು ಮುಟ್ಟಿ ದೇವಸ್ಥಾನಗಳಿಗೆ ಹೋಗಿ ದೇವರ ದರ್ಶನ ಮಾಡಿಕೊಂಡು ಮನೆಗಳಿಗೆ ಹೋಗುತ್ತಾರೆ. ಈ ಸಮುದಾಯದ ಸಂಬಂಧಿಕರು ಸತ್ತ ವ್ಯಕ್ತಿಯ ಮನೆಯಲ್ಲಿ ಜ್ಯೋತಿಯನ್ನು ನೋಡಿಕೊಂಡು ಮನೆಗಳಿಗೆ ಹೋಗುತ್ತಾರೆ. ಶವಸಂಸ್ಕಾರ ಮುಗಿಸಿಕೊಂಡು ಬರುವುದರೊಳಗಾಗಿ ಮನೆಯ ಮುಂದೆ ಸಗಣಿ, ಕಸ ತೆಗೆದು ಮನೆಯ ಅಕ್ಕಪಕ್ಕದವರು ಪಾತ್ರೆ ಸಾಮಾನುಗಳನ್ನು ತೊಳೆದು ಎಲ್ಲವುಗಳನ್ನು ಸ್ವಚ್ಛಮಾಡಿಕೊಳ್ಳುತ್ತಿದ್ದರು.

ಮೂರನೇ ದಿನ ಸೂತಕ ಕಳೆದುಕೊಳ್ಳುತ್ತಾರೆ. ಅಣ್ಣ ತಮ್ಮಂದಿರು ಸೂತಕದ ಮನೆಯನ್ನು (ಮುಟ್ಟಿನ ಮನೆ) ಸುಣ್ಣ ಬಳಿದು ಸ್ವಚ್ಛಮಾಡುತ್ತಾರೆ. ಮತ್ತು ಗೋಗಂಜನ್ನು ಹಾಕುತ್ತಾರೆ. ಬೆಳಿಗ್ಗೆ ಮೂರು-ನಾಲ್ಕು ಜನ ಸೇರಿ ಸ್ಮಶಾನಕ್ಕೆ ಹೋಗಿ ಸಮಾದಿಯ ಮುಂದೆ ನೀರಿನಿಂದ ತಣ್ಣಗೆ ಮಾಡಿ ಪೂಜೆಮಾಡುತ್ತಾರೆ. ಬೇಯಿಸಿದ

ಅನ್ನವನ್ನು ಮಾಡಿ ಅನ್ನವನ್ನು ಮೂರು ಎಲೆಗೆ ಎಡೆಹಾಕಿ ನಂತರ ಅವನು ಹುಟ್ಟಿನಿಂದ ಏನೇನು ಹಾಕಿಕೊಳ್ಳುತ್ತಿದ್ದನೋ ಅಂದರೆ ಬೀಡಿಯಾಗಿರಬಹುದು, ಪ್ಯಾಕೀಟು ಆಗಿರಬಹುದು ಗುಟುಕ ಆಗಿರಬಹುದು ಇವೆಲ್ಲವುಗಳನ್ನು ತೆಗೆದುಕೊಂಡು ಸಮಾದಿಯ ಮುಂಭಾಗದಲ್ಲಿ ಇಡುತ್ತಾರೆ. ಅದನ್ನು ಇಟ್ಟು ಜನರು ಸ್ವಲ್ಪ ದೂರ ಹೋಗಿ ಕುಳಿತುಕೊಳ್ಳುತ್ತಾರೆ. ಸ್ವಲ್ಪ ಸಮಯದ ನಂತರ ಕಾಗೆಯಾಗಿರಬಹುದು, ಉಡ ಆಗಿರಬಹುದು ಹದ್ದು ಆಗಿರಬಹುದು ಯಾವುದೇ ಪ್ರಾಣಿಯಾಗಿರಬಹುದು ಅದು ತಿನ್ನುವವರೆಗೂ ಅಲ್ಲಿದ್ದು ನಂತರ ಮನೆಗೆ ಬರುತ್ತಾರೆ. "ಕಾಗೆ ಬಂದು ತಿಂದರೆ ಒಳ್ಳೆಯದಾಗುತ್ತದೆ ಎಂದು ಭಾವಿಸುತ್ತಾರೆ. ಕಾಗೆ ಬಾರದಿದ್ದರೆ ಅಯ್ಯೋ ಪಾಪಿ ಇವನು ತಪ್ಪು ಮಾಡಿದ್ದಾನೆ ಎಂದು ತಿಳಿದುಕೊಳ್ಳುತ್ತಾರೆ."

ಹದಿನಾರನೇ ದಿನ ದೊಡ್ಡ ದಿವಸದ ಆಚರಣೆ ನಡೆಯುತ್ತದೆ. ಅಂದು ನೆಂಟರು ಬಂಧು ಬಳಗದವರು ಸ್ನೇಹಿತರು ಊರಿನ ಜನರು ಸೇರಿರುತ್ತಾರೆ. ಸತ್ತ ವ್ಯಕ್ತಿಯ ಹೆಸರಿನಲ್ಲಿ ಹೊಸ ಬಟ್ಟೆ ಏರಿಸಿ ಪೂಜೆ ಮಾಡುತ್ತಾರೆ. ಮತ್ತು ದಿವಸಕ್ಕೆ ಬಂದವರಿಗೆಲ್ಲ ಊಟ ಹಾಕಿಸುತ್ತಾರೆ. ಮಾದಿಗರು ಮೂರನೇ ದಿನದಂದು ಕರ್ಮಕಳೆದುಕೊಳ್ಳಲು ಬ್ಯಾಟೆಯನ್ನು ಕಡಿದು ಅಡುಗೆ ಮಾಡುತ್ತಿದ್ದರು. ಆದರೆ ದೊಡ್ಡ ದಿವಸದಲ್ಲಿ ಸಿಹಿ ಅಡಿಗೆಯನ್ನೇ ಮಾಡಿ ಬಂದವರಿಗೆ ಹುಣ್ಣಿಸಿ ಕಳುಹಿಸುತ್ತಿದ್ದರು. ವ್ಯಕ್ತಿ ಸ್ಥಳದಲ್ಲಿ ಒಂದು ಕೋಳಿಯನ್ನು ಬಲಿಕೊಡುತ್ತಿದ್ದರು.

### ಸಾವಿನ ನಂತರ ಪರಿಕಲ್ಪನೆ

ಮಾದಿಗ ಸಮುದಾಯದಲ್ಲಿ ಸತ್ತಂತ ವ್ಯಕ್ತಿಯಿಂದ ಏನಾದರೂ ತೊಂದರೆ ಉಂಟಾದರೆ ಕನಸಿನಲ್ಲಿ ಕಾಣಿಸಿಕೊಂಡರೆ ಜಂಗಮರಲ್ಲಿ ಹೋಗಿ ಭವಿಷ್ಯ ಶಕುನ ಕೇಳಿಸಿ ಸತ್ತ ವ್ಯಕ್ತಿಯ ದೋಷವನ್ನು ಹುಡುಕುತ್ತಾರೆ. ಸ್ಮಶಾನಕ್ಕೆ ಹೋಗಿ ಸಮಾಧಿಗೆ ಪೂಜೆ ಸಲ್ಲಿಸಿ ಬರುತ್ತಾರೆ. ಮತ್ತು ಸತ್ತ ವ್ಯಕ್ತಿಯ ಹೆಸರಿನಲ್ಲಿ ಹಬ್ಬದ ದಿನಗಳಲ್ಲಿ ಹೊಸ ಬಟ್ಟೆಯನ್ನು ಏರಿಸಿ ಅದಕ್ಕೆ ಶಾಂತಿಯನ್ನು ಕೋರುತ್ತಾರೆ ಎಂದು ಹೇಳಬಹುದು.

### ೪.೨. ವಾರ್ಷಿಕಾವರ್ತನ ಆಚರಣೆಗಳು

ಹಬ್ಬಗಳು ಒಂದು ಜನಾಂಗದ ಸಾಂಸ್ಕೃತಿಕ ಚಿಹ್ನೆಗಳು, ನಂಬಿಕೆಗಳು ಮತ್ತು ಸಂಪ್ರದಾಯಗಳ ಕ್ರಿಯಾ ರೂಪಗಳೇ ಹಬ್ಬಗಳು ಎಂದು ಹೇಳಬಹುದು. ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನಗಳ ಫಲವಾಗಿ ಹಬ್ಬಗಳು ಹುಟ್ಟು ಪಡೆದವು. ಹೀಗಾಗಿ ಹಲವು ಸಂಪ್ರದಾಯಗಳ ಮೊತ್ತವೇ ಹಬ್ಬವಾಗಿದೆ ಎಂದು ಹೇಳಬಹುದು.

ಬಾಗ್ಸ್‌ರವರ ಪ್ರಕಾರ "ಸಾಮಾನ್ಯವಾಗಿ ಪ್ರತಿವರ್ಷ ಸಾಮಾಜಿಕ ಕ್ಷೇಮಕ್ಕಾಗಿ ವಿಶೇಷ ಸಂದರ್ಭದಲ್ಲಿ ಆಚರಿಸುವ ಜಾನಪದ ಸಂಗತಿಗಳ ಮತ್ತು ಸಂಪ್ರದಾಯಗಳ ಸಮ್ಮಿಶ್ರ ಜಟಿಲ ಘಟಕವೇ ಹಬ್ಬ" ಎಂದಿದ್ದಾರೆ.

ಮಾದಿಗ ಸಮುದಾಯದಲ್ಲಿ ಇತರೆ ಬುಡಕಟ್ಟುಗಳು ಆಚರಿಸುವಂತೆ ತಮ್ಮದೇ ಆದ ಕೆಲವು ವೈಶಿಷ್ಟ್ಯ ಪೂರ್ಣ ಹಬ್ಬಗಳನ್ನು ಆಚರಿಸುತ್ತಾ ಬಂದಿದ್ದಾರೆ. ಅವುಗಳಲ್ಲಿ ಪ್ರಮುಖವಾದ ಹಬ್ಬಗಳನ್ನು ನಾವು ಕಾಣಬಹುದಾಗಿದೆ.

### ೪.೨.೧. ಸಂಕ್ರಾಂತಿ

ಸಂಕ್ರಾಂತಿ ಎಂದ ಕೂಡಲೇ ನಮಗೆ ನೆನಪಿಗೆ ಬರುವುದು ಜನವರಿ ತಿಂಗಳಲ್ಲಿ ಅಂದರೆ ಬೇರೆ ಬೇರೆ ಹಬ್ಬಗಳು ಕೆಲವೊಂದು ತಿಂಗಳಲ್ಲಿ ಬದಲಾವಣೆಗಳಾಗಬಹುದು. ಆದರೆ ಸಂಕ್ರಾಂತಿ ಹಬ್ಬ ಮಾತ್ರ ಬದಲಾವಣೆ ಆಗುವುದಿಲ್ಲ. ಅದು ಜನವರಿ ತಿಂಗಳಲ್ಲೇ ಬರುತ್ತದೆ. ಅಂದರೆ ಈ ಹಬ್ಬದ ವಿಶೇಷತೆ ಏನೆಂದರೆ ಹೆಚ್ಚು ಕುಂಬಳಕಾಯಿ, ಅಕ್ಕಿ, ಹೆಸರು ಮುಂತಾದ ಪದಾರ್ಥಗಳಿಂದ ಒಂದು ರಂಗೋಲಿಯನ್ನು ಹಾಕಿ ಆ ರಂಗೋಲಿಯ ಮೇಲೆ ಸಗಣಿಯನ್ನು ತೆಗೆದುಕೊಂಡು ಅದರಿಂದ ಸಂಕ್ರಮಣವನ್ನು ಮಾಡಿ ಬೆಳಗಿನ ಹೊತ್ತು ಅಂದರೆ ೭ ಅಥವಾ ೮ ಗಂಟೆಗೆ ಆ ರಂಗೋಲಿಯ ಮೇಲೆ ಕೂಡಿಸುತ್ತಿದ್ದರು. ಆ ಸಂಕ್ರಮಣನಿಗೆ ಊದಿನ ಕಡ್ಡಿ ಹಚ್ಚಿ ಭಕ್ತಿಯಿಂದ ಪೂಜೆಯನ್ನು ಮಾಡುತ್ತಿದ್ದರು. ನಂತರ ಈ ಹಬ್ಬವು ಬಡವರಿಗೂ ಕೂಡ ಒಂದು ಹಬ್ಬವಾಗಿದೆ. ಸಂಕ್ರಾಂತಿಗೆ ಎಲ್ಲಾ ಸವಲತ್ತುಗಳು ಇರುತ್ತವೆ. ಇದು ಎಲ್ಲಾ ಹಬ್ಬಗಳಂತೆ ಇರುವುದಿಲ್ಲ. ಈ ಸಂಕ್ರಾಂತಿಯು ಒಂದೊಂದು ವರ್ಷದಲ್ಲಿ ಆನೆಯ ಮೇಲೆ, ಸಿಂಹದ ಮೇಲೆ ಇಲ್ಲವೆ ಹುಲಿಯ ಮೇಲೆ ಅಥವಾ ಹಂದಿಯ ಮೇಲೆ ಬರುತ್ತದೆ. ಸಂಕ್ರಮಣನು

ಯಾವುದರ ಮೇಲೆ ಬಂದರೂ ಒಳ್ಳೆಯದಾಗುತ್ತದೆ ಎಂಬುದು ಜನರ ನಂಬಿಕೆಯಾಗಿದೆ. ಅದರಿಂದ ಅವನ ದರ್ಶನಕ್ಕಾಗಿ ಜನರು ನಿರೀಕ್ಷಿಸುತ್ತಾರೆ. ಏಕೆಂದರೆ ಈ ಸಮುದಾಯದಲ್ಲಿ ಅತಿ ಕೆಳಮಟ್ಟದ ಜನಾಂಗದವರಾದರೂ ಕೂಡ ದಿನಕೂಲಿ ಮಾಡಿಕೊಂಡು ಜೀವನ ನಡೆಸಿದರೂ ಸಹ ಇದ್ದಷ್ಟರ ಮಟ್ಟಿಗೆ ಹಬ್ಬವನ್ನು ಆಚರಿಸುತ್ತಾರೆ. ಆದ್ದರಿಂದ ಯಾವುದೇ ಹಬ್ಬವನ್ನು ತೆಗೆದುಕೊಂಡಾಗ ಎಲ್ಲಾ ಹಬ್ಬಗಳನ್ನು ಕೊಂಚ ಮಟ್ಟಿಗೆ ಆಚರಣೆ ಮಾಡುವುದನ್ನು ಕಾಣಬಹುದಾಗಿದೆ. ಬಸವಣ್ಣ ಹುಟ್ಟಿದ್ದ ದಿನವನ್ನು ಸಹ ಆಚರಿಸಲಾಗುತ್ತದೆ.

### ೪.೨.೨. ನಾಗರ ಪಂಚಮಿ

ಹೊಸ ಮಡಿಕೆಯೊಂದರಲ್ಲಿ ಅನ್ನವನ್ನು ಮಾಡಿಕೊಂಡು ಒಂದೊತ್ತಿನಿಂದ ಆಂಜನೇಯನ ಗುಡಿಗೆ ಹೋಗಿ ತೆಂಗಿನ ಕಾಯಿ ಹೊಡೆಸಿ ಪೂಜೆ ಮಾಡಿಕೊಂಡು ಬರುತ್ತಾರೆ. ಆದರೆ ಈಗಿನ ಕಾಲದಲ್ಲಿ ಬಹಳ ಕಡಿಮೆ ಆಗಿದೆ. ಈ ಹಬ್ಬಕ್ಕೆ ನೆನಸಿದ ನೆನಗಡಲೆ, ಊದಿನ ಕಡ್ಡಿ, ಅಂಗನೂಲು ತೆಗೆದುಕೊಂಡು ಹುತ್ತವಿರುವ ಕಡೆಗೆ ಒಂದೊತ್ತಿನ ಮೂಲಕ ಹೋಗುತ್ತಾರ. ನಂತರ ಹಾಲು ಹುತ್ತಕ್ಕೆ ಹಾಕಿದ ನಂತರ ಮನೆಗೆ ಬಂದು ಮಕ್ಕಳೆಲ್ಲರೂ ಸೇರಿಕೊಂಡು ಊಟವನ್ನು ಮಾಡುತ್ತಾರೆ. ಕೆಲವು ಜನರು ಹುತ್ತಕ್ಕೆ, ಇನ್ನೂ ಕೆಲವರು ಕಲ್ಲಿನ ನಾಗರಕ್ಕೆ ಹಾಲನ್ನು ಹಾಕುತ್ತಾರೆ. " ಭಾರತದಲ್ಲಿ ನಾಗಾರಾಧನೆ ಆರ್ಷೆಯಾಗಿ ಬೆಳೆದು ಬಂದಿದೆ. ವೇದ, ಪುರಾಣ, ಮಹಾಕಾವ್ಯ, ಜನಪದ ಸಾಹಿತ್ಯ ಇವೆಲ್ಲವು ನಾಗನಿಗೆ ಸಂಬಂಧಿಸಿದ ಉಲ್ಲೇಖಗಳು, ಪಾರ್ಶ್ವನಾಥ ತೀರ್ಥಕರನ ತಲೆಯ ಮೇಲ್ಭಾಗದಲ್ಲಿ ನಾಗನ ಹೆಡೆಯ ಲಾಂಚನವಿದೆ. ನಾಗನು ವಿಷ್ಣುವಿಗೆ ಹಾಸಿಗೆ, ಶಿವನಿಗೆ ಕಂಠಾಭರಣ, ಗಣಪತಿಗೆ ಹೊಟ್ಟೆಯ ಪಟ್ಟಿ ಸ್ವತಃ ಭೂಭಾರವನ್ನು ಹೊರುವ ಅಸಾಧಾರಣ ಶಕ್ತಿಶಾಲಿಯಾದ ಆದಿಶೇಷ ಎಂದು ಹೇಳಬಹುದು. ನಾಗಾರಾಧನೆಯ ವಿಶೇಷತೆ ಏನೆಂದರೆ ಸ್ಕಂಧನೆಂಬ ಕಾರ್ತಿಕೇಯನನ್ನು ನಾಗರೂಪದಿಂದ ಸುಬ್ರಹ್ಮಣ್ಯನೆಂಬ ಹೆಸರಿನಲ್ಲಿ ಆರಾಧಿಸುತ್ತಿದ್ದರು.

ನವಗ್ರಹಗಳಲ್ಲಿಯ ರಾಹುಪೀಡಿತ ಪರಿಹಾರಾರ್ಥವಾಗಿ ದಾನ ಮಾಡುವುದು, ನಾಗ ಪ್ರತಿಮೆಯನ್ನು ಆರಾಧಿಸುವುದು, ಸುಬ್ರಹ್ಮಣ್ಯನೆಂಬ ಸ್ಕಂಧನನ್ನು ಪುತ್ರ ಸಂತಾನ ಮತ್ತು ಕುಷ್ಟರೋಗ ನಿವಾರಣೆಗಾಗಿ ನಾಗ ಸುಬ್ರಹ್ಮಣ್ಯನಿಗೆ ಹೊರುವ ಹರಕೆಗಳಲ್ಲಿ ತನುವು ತಂಬಿಲ ನಾಗದರ್ಶನ, ನಾಗಮಂಡಲ ಇತ್ಯಾದಿಗಳು ಪ್ರಮುಖವಾದವುಗಳಾಗಿವೆ ಎಂಬುದಾಗಿ ಅಭಿಪ್ರಾಯ ಪಡಲಾಗಿದೆ.

### ೪.೨.೩. ಯುಗಾದಿ

ಹಳೆಯ ಮತ್ತು ಹೊಸವರ್ಷಗಳನ್ನು ಜೋಡಿಸುವ ಒಂದು ಸುವರ್ಣ ಸೇತುವೆಯಾಗಿದೆ. ಈ ಯುಗಾದಿಯು ಒಂದು ವರ್ಷಕ್ಕೊಮ್ಮೆ ಬರುವಂತಹ ಹಬ್ಬವಾಗಿದೆ. ಸಮುದಾಯದವರು ಈ ಹಬ್ಬವನ್ನು ಆಚರಿಸುತ್ತಾರೆ. ಅಂದರೆ ಈ ಯುಗಾದಿಯ ಹಬ್ಬದಲ್ಲಿ ವಿಶೇಷವಾಗಿ ಜಾತ್ರೆ ನಡೆಯುತ್ತದೆ. ಅಲ್ಲಿಗೆ ದೇವಸಮುದ್ರದ ಸುತ್ತಮುತ್ತಲಿರುವ ಹಳ್ಳಿಗಳು ಬಂದು ಸೇರುತ್ತವೆ. ಅಂದರೆ, ಪರಮೇಶ್ವರ ದೇವಸ್ಥಾನದಲ್ಲಿ ಒಂದು ರಥವನ್ನು ಎಳೆಯುತ್ತಾರೆ. ಇದರಿಂದ ಜನರೆಲ್ಲಾ ಬಂದು ಸೇರುತ್ತಾರೆ. ಚಿಕ್ಕ ಮಕ್ಕಳ ಆಟಿಕೆಗಳ ಅಂಗಡಿ ಪರಿಷೆ ನೆರೆದಿರುತ್ತದೆ. ಈ ಹಬ್ಬದ ಒಂದು ದಿನದ ಮುಂಚೆ ಆಯುಧ ಪೂಜೆ ಆಯುಧ ಪೂಜೆ ಇರುತ್ತದೆ. ನಂತರ ಗುಡ್ಡ ಬೆಟ್ಟಗಳಲ್ಲಿನ ದೇವಾಯಗಳಿಗೆ ಹೋಗಿಬರುತ್ತಾರೆ. ಈ ಹಬ್ಬದಲ್ಲಿ ಕೆಲವರು ಮನೆಯಲ್ಲಿ ಹಿರಿಯರ ಹಬ್ಬವನ್ನು ಸಹ ಆಚರಿಸುತ್ತಾರೆ. ಏಕೆಂದರೆ ಸತ್ತವರ ಆತ್ಮಕ್ಕೆ ಶಾಂತಿ ಸಿಗಲೆಂದು ಹಾರೈಸುತ್ತಾರೆ. ಅಂದರೆ ಹೆಣ್ಣು, ಗಂಡು ಮಕ್ಕಳೆಲ್ಲರು ಗತಿಸಿಹೋದ ಹಿರಿಯರಿಗೆ ನಮಸ್ಕರಿಸಿ ಭಕ್ತಿಯನ್ನು ಸೂಚಿಸುತ್ತಾರೆ.

ಪಾಲ್ಗುಣ ಬಹುಳ ಅಮವಾಸ್ಯೆಯ ದಿನ ಹಳೆಯ ವರ್ಷಕ್ಕೆ ವಿದಾಯ ಹೇಳಿ, ಮರುದಿನ ಚೈತ್ರ ಶುಕ್ಲ ಪ್ರತಿಪದೆಯೆಂದು ಹೊಸವರ್ಷವನ್ನು ಸ್ವಾಗತಿಸುತ್ತೇವೆ. ನಾವೀಗ ಇರುವ ಕಲಿಯುಗದ ಆದಿಯ ದಿನವೇ ಯುಗಾದಿ ಆಗಿದೆ. ಕೃತಯುಗ ಆರಂಭವಾಗಿದ್ದು ಕಾರ್ತಿಕ ಶುಕ್ಲ ನವಮಿಯಂದು, ವೈಶಾಖ ಶುಕ್ಲ ತೃತೀಯ ತ್ರೇತಾಯುಗದ ಮೊದಲ ದಿನ ದ್ವಾಪರದ ಆರಂಭ ಮಾಘಮಾಸ ಬಹಳ ಮುಖ್ಯವಾದವು. ಹಾಗಾಗಿ ಕಲಿಯುಗದ ಆರಂಭದ ದಿನ ಈ ಚೈತ್ರ ಶುಕ್ಲ ಪಾಡ್ಯ. ಹೀಗಾಗಿ ನಮ್ಮ ಯುಗದ ಆದಿ ದಿನ ಯುಗಾದಿ ಆಗಿದೆ. ಹಾಗಾಗಿ ಹಿಂದುಗಳು ಆಚರಿಸುವ ಪ್ರಮುಖ ಹಬ್ಬವಾಗಿದೆ. ಈ ಹಬ್ಬವನ್ನು ಜನರು ಬಹಳ ಸಂತೋಷದಿಂದ, ಸಡಗರ, ಸಂಭ್ರಗಳಿಂದ

ಆಚರಿಸುತ್ತಾರೆ. ಗ್ರಾಮೀಣರಂತೂ ಈ ಹಬ್ಬದಲ್ಲಿ ಹಲವು ಆಟ, ಪ್ರದರ್ಶನಗಳಿಂದ ನಲಿದಾಡುತ್ತಾರೆ. ಗುಂಡು ಎತ್ತುವುದು, ಗಡಾರಿಯನ್ನು ಎತ್ತುವುದು, ನಿಂಬೆ ಹಣ್ಣು ಎಸೆಯುವ ಸ್ಪರ್ಧೆ, ಚೀಲ ಎತ್ತುವುದು, ಕುಸ್ತಿ ಇನ್ನಿತರ ಜನಪದ ಕಲೆ, ಪ್ರದರ್ಶನಗಳಲ್ಲಿ ಜನ ಪಾಲ್ಗೊಳ್ಳುವರು. ಬಹುತೇಕ ಹಳ್ಳಿಗಳಲ್ಲಿ ಆಂಜನೇಯನ ದೇವಸ್ಥಾನದಲ್ಲಿ ಪಂಚಾಂಗ ಹೇಳಿಸಲಾಗುತ್ತದೆ. ವರ್ಷದ ತಮ್ಮ ಭವಿಷ್ಯವನ್ನು ಪುರೋಹಿತರು ಇಲ್ಲವೆ ಪಂಚಾಂಗ ನಿಪುಣರಿಂದ ಕೇಳಿ ತಿಳಿದುಕೊಳ್ಳುತ್ತಾರೆ. ಆ ವರ್ಷ ಬೆಳೆಯಬೇಕಾದ ಫಸಲು ಯಾವುದಿರಬೇಕೆಂದು ಸಹ ನಿರ್ಧರಿಸುವರು. ಈ ಹಬ್ಬದ ವಿಶೇಷ ಅಡುಗೆ ಹೋಳಿಗೆ ಊಟವಾಗಿದೆ. ಹಾಗೆಯೇ ಬೇವು ಬೆಲ್ಲವನ್ನೂ ಸಹ ಸೇವಿಸಲಾಗುತ್ತದೆ. ಯುಗಾದಿಯ ಹಬ್ಬದಂದು ಸ್ವಲ್ಪವಾದರೂ ಮಳೆ ಬರಬೇಕೆಂದು ನಿರೀಕ್ಷಿಸುತ್ತಾರೆ. ಹೊಸ ವರ್ಷದಂದು ಹೊಸ ನೀರು ಭುವಿಗೆ ಬರಬೇಕೆಂಬ ಅವರ ಆಶಯ ಅರ್ಥಪೂರ್ಣವಾದುದಾಗಿದೆ.

**ಯುಗಾದಿಯ ಆಚರಣಾತ್ಮಕ ಸ್ವರೂಪ**

ಸುದೀರ್ಘವಾದ ಅಂಧಕಾರವಾದ ಮತ್ತು ಶೀತಕಾಲ ಕಳೆದು ಸಂತೋಷ ಪ್ರದವಾದ ವಸಂತದ ಆಗಮನವನ್ನು ಸೂಚಿಸಲು ಈ ಯುಗಾದಿಯು ಮರಳಿ ಮರಳಿ ಬರುತ್ತಿದೆ. ಇದು ನಿದ್ರಿಸುವ ಭೂತಾಯಿಯನ್ನು ಎಬ್ಬಿಸುವ ಒಂದು ಹಬ್ಬವಾಗಿದೆ. ಋತುರಾಜ ವಸಂತನಿಗೆ ಸ್ವಾಗತ ಹೇಳುವ ಪರ್ವದಿನ. ಈ ಯುಗಾದಿಯು ಉಷಾಃ ಕಾಲದಲ್ಲಿ ಭಗವಂತನನ್ನು ಸ್ಮರಿಸುತ್ತಾ ಬಲ ಮಗ್ಗುಲಲ್ಲಿ ಹೇಳಬೇಕು. ನಂತರ ಮಧ್ಯಾಹ್ನದ ಭೋಜನದಲ್ಲಿ ಮೊದಲು ಬೇವು ಬೆಲ್ಲ ತಿಂದು ನಂತರ ಹೋಳಿಗೆ ಮತ್ತು ಪಾಯಸವನ್ನು ಊಟ ಮಾಡುವುದು ರೂಢಿಯಲ್ಲಿತ್ತು. ನಂತರ ಸಂಜೆಯ ಸಮಯದಲ್ಲಿ ಪಂಚಾಂಗ ಶ್ರವಣ, ಚಂದ್ರೋದಯ ಕಾಲದಲ್ಲಿ ಪೂರ್ವದಿಗಂತದಲ್ಲಿ ಮೂಡಿಬರುವ ಒಂದು ಕಲೆಯಿಂದ ಬೆಳಗುವ ಚಂದ್ರನನ್ನು ಕಂಡು ನಮಿಸುವುದು ಇವೆಲ್ಲವೂ ಈ ದಿನದ ಆಚರಣೆಗಳು. ಈ ಆಚರಣೆಯಲ್ಲಿ ಜನರು ಹಲವು ತರಹದ ಆಟಪಾಠಗಳನ್ನು, ಆಚಾರ ವಿಚಾರಗಳನ್ನು ಪ್ರದರ್ಶಿಸುತ್ತಾರೆ. ಇಲ್ಲಿ ಮಾದಿಗ ಅಥವಾ ಲಿಂಗಾಯಿತ ಇತ್ಯಾದಿ ಯಾವುದೇ ಸಮುದಾಯವರಾಗಿರಲಿ ಎಲ್ಲರೂ ಸಹ ಈ ಹಬ್ಬವನ್ನು ಆಚರಿಸುತ್ತಾರೆ.

**ಬೇವು ಬೆಲ್ಲ**

ಯುಗಾದಿ ಎಂದ ಕೂಡಲೇ ನಮಗೆ ನೆನಪಿಗೆ ಬರುವುದು ಬೇವ ಬೆಲ್ಲ. ಅಂದರೆ ಬೇವಿನ ಚಿಗುರಿನ ಕಹಿ, ಬೆಲ್ಲದ ಸಿಹಿ ಇವೆರಡೂ ಬದುಕಿನ ಪ್ರತೀಕವಾಗಿದೆ. ಅಂದರೆ ಇದು ನೋವು ನಲವಿನ ಸಂಕೇತವಾಗಿದೆ. ಒಳಿತು, ಕೆಡುಕು, ಅದೃಷ್ಟಗಳ ಪ್ರತಿಬಿಂಬವಾಗಿದೆ. ಹಿಂದಿನ ಬೇವನ್ನು ಜೀರ್ಣಿಸಿಕೊಂಡು ಇಂದಿನ ಬೆಲ್ಲವನ್ನು ಸವಿಯಲು ಯೋಗ ಬೇಕಾಗುತ್ತದೆ. ನಮ್ಮ ನಾಲಿಗೆಗೆ ಮಾತ್ರ ಸಿಹಿಯಾದುದಲ್ಲದೇ ಹೊಟ್ಟೆಯೊಳಗೆ ಹೋದಾಗ ಕಹಿಯೂ ಆಗುತ್ತದೆ. ಆದ್ದರಿಂದ ಇವೆರಡನ್ನು ಯುಕ್ತ ಪ್ರಮಾಣದಲ್ಲಿ ಸೇವಿಸುವುದು ಜಾಣತನವಾಗಿರುವುದು. ಇದರಿಂದ ಕವಿ ಚೆನ್ನವೀರ ಕಣವಿಯವರು "ಜೀವನವೆಲ್ಲಾ ಬೇವು-ಬೆಲ್ಲ, ಎರಡು ಸವಿಯುವವನೇ ಕಲಿಮಲ್ಲ" ಎಂದಿದ್ದಾರೆ. ಆದರೆ ನಮ್ಮ ಬದುಕಿನಲ್ಲಿ ನಮಗೆಂದೂ ಕಹಿಬೇಡ ಸಿಹಿ ಬೇಕು ಎಂಬುದು ಜನರ ಬಯಕೆಯಾಗಿದೆ. ಆದರೆ ವಾಸ್ತವವೇ ಬೇರೆಯಾಗಿದೆ. ಎಲ್ಲರ ಜೀವನದಲ್ಲೂ ಸುಖಃ-ದುಃಖ, ಲಾಭ-ನಷ್ಟ, ಮಾನ-ಅಪಮಾನ, ಜಯ-ಅಪಜಯ ಮಿಶ್ರಗೊಂಡಿರುತ್ತವೆ. ಆದ್ದರಿಂದ ಮಾನವನು ಸುಖ ಬಂದಾಗ ಹಿಗ್ಗದೆ ಕಷ್ಟ ಬಂದಾಗ ಕುಗ್ಗದೆ ಜೀವನ ಯಾತ್ರೆಯನ್ನು ಕೈಗೊಳ್ಳಬೇಕಾಗುತ್ತದೆ. ಯುಗಾದಿಯು ಹಳೆಯ ಹಾಗೂ ಹೊಸ ವರ್ಷಗಳನ್ನು ಜೊಡಿಸುವ ಪರ್ವಕಾಲ ಹಾಗು ಕೊಂಡಿಯಾಗಿದೆ. ಯುಗಾದಿಯು ಹೊಸ ವರ್ಷದ ಮೊದಲ ದಿನವಾಗಿರುತ್ತದೆ. ಋತುರಾಜ ವಸಂತನನ್ನು ಜೊತೆಗಿಟ್ಟುಕೊಂಡು ಯುಗಾದಿಯು ಮೆಲ್ಲಮೆಲ್ಲನೆ ಬರುತ್ತದೆ. ಆದ್ದರಿಂದ ವರಕವಿಯಾದ ಬೇಂದ್ರೆಯವರು ಯುಗಾದಿಯ ಆಗಮನದಲ್ಲಿ ಹೊಸತನವನ್ನು ಕಾಣುತ್ತಾರೆ. ಅದನ್ನು ಆದರದಿಂದ ಬರಮಾಡಿಕೊಳ್ಳುತ್ತಾರೆ.

ಯುಗ ಯುಗಾದಿ ಕಳೆದರೂ
ಯುಗಾದಿ ಮರಳಿ ಬರುತಿದೆ
ಹೊಸ ವರುಷಕೆ ಹೊಸ ಹರುಷವ
ಹೊಸತು ಹೊತು ತರುತಿದೆ

ಹೀಗೆ ಯುಗಾದಿಯನ್ನು ಬೇಂದ್ರೆಯವರು ಬರಮಾಡಿಕೊಳ್ಳುತ್ತಾರೆ. ಎಂದು ಹೇಳಬಹುದು.

ಕರೆಯದಿದ್ದರೂ ನಾವು, ನೀವು ಬಂದೇ ಬರುವೆ

ಅಲ್ಲವೆ ಬಾ ಮತ್ತೆ, ಬಾ ಯುಗಾದಿ

ಅಂದರೆ ಅನುಭಾವಿ ಕವಿಯಾದ ಚನ್ನವೀರ ಕಣವಿಯವರು ಆದ್ಯಂತ ರಹಿತವಾದ ಕಾಲಪುರುಷ ಯುಗಾದಿಯನ್ನು ಮಾತಿನ ಚಾವಟಿಯೊಂದಿಗೆ ಎದುರುಗೊಳ್ಳುತ್ತಾರೆ. ಯುಗಾದಿಗೇ ಬೇವು ಬೆಲ್ಲ ನೀಡಿ ವ್ಯಂಗ್ಯದ ಸೂಜಿಗಳಿಂದ ಅವನನನ್ನು ಚುಚ್ಚುತ್ತಾರೆ. ಯುಗಾದಿ ಎಂದ ಕೂಡಲೇ ನಮಗೆ ಹಿಂದಿನ ಒಂದು ಪುರಾಣ ಕಥೆಯು ನೆನಪಿಗೆ ಬರುತ್ತದೆ. ಅದೇನೆಂದರೆ ಈ ದಿನ ಅಂದರೆ ಯುಗಾದಿ ಪಾಡ್ಯದ ದಿನದಂದು ಶ್ರೀರಾಮ ರಾವಣನನ್ನು ಕೊಂದು ಅಯೋಧ್ಯೆಗೆ ಬಂದು ರಾಮ ರಾಜ್ಯವಾಳಲು ಪ್ರಾರಂಭಿಸಿದ. ಅಂದು ಶ್ರೀರಾಮನ ಜಯಕ್ಕೆ ಕಾರಣಕರ್ತರಾದ ಕನ್ನಡ ನಾಡಿನ ಕವಿವೀರರು ಹಾಗೂ ಅಯೋಧ್ಯೆಯ ಪ್ರಜೆಗಳು ಉಂಡುಟ್ಟು ನಲಿದಾಡಿದರು. ಶ್ರೀರಾಮನೊಂದಿಗೆ ಪ್ರಜೆಗಳು ತಮ್ಮ ತಮ್ಮ ಮನೆಯ ಮುಂದೆ ವಿಜಯ ಪತಾಕೆಯನ್ನು ಹಾರಿಸಿದರು. ಆ ಸಂತೋಷ ಅಂದಿಗೇ ಸೀಮಿತವಾಗಬಾರದು ಎಂದರು. ಅದರ ಸ್ಮರಣೆಗಾಗಿ ರಾಮರಾಜ್ಯದ ಕನಸು ಹೊಂದಿರುವ ಭಾರತೀಯರು ಇಂದೂ ಈ ಹಬ್ಬದಂದು ಮನೆಯ ಮುಂದೆ ಬಾವುಟ ಹಾರಿಸಿ ನಲಿದಾಡುವ ಪದ್ಧತಿ ಉಂಟು. ಅದಕ್ಕಾಗಿಯೇ ಇದನ್ನು ಗುಡಿಪಾಡ್ಯ ಎಂಬ ಹೆಸರು ಬಂತು ಎಂದು ಹೇಳಬಹುದಾಗಿದೆ. ಯುಗಾದಿಯ ಹಬ್ಬದಲ್ಲಿ ಮಾದಿಗ ಸಮುದಾಯದವರು ಹಬ್ಬ ಮುಗಿದ ನಂತರ ಕರಿಯನ್ನು ಮಾಡುತ್ತಾರೆ. ಇಲ್ಲಿ ಕರಿ ಎಂದರೆ ಆ ಸಮುದಾಯದವರು ದನದ ಮಾಂಸವನ್ನು ತೆಗೆದುಕೊಂಡು ಬಂದು ಅದನ್ನು ಬೇಯಿಸಿ ಮನೆಮಂದಿಯೆಲ್ಲರೂ ಊಟವನ್ನು ಮಾಡುತ್ತಿದ್ದರು. ಇದನ್ನೇ ಕರಿ ಎಂದು ಕರೆಯುತ್ತಾರೆ. ನಂತರ ದಿನಕೆಲಸಗಳನ್ನು ಮಾಡುತ್ತಾ ತಮ್ಮ ದೈನಂದಿನ ಜೀವನವನ್ನು ಸಾಗಿಸುತ್ತಿದ್ದರು.

**ದಸರಾ**

ಮಾದಿಗರ ಸಮುದಾಯದಲ್ಲಿ ಸಹ ಈ ಹಬ್ಬವನ್ನು ಆಚರಿಸುತ್ತಿದ್ದರು. ಈ ಹಬ್ಬದಲ್ಲಿ ಬೇರೆ ಜನಾಂಗದವರು ಅದರಲ್ಲಿ ಮುಖ್ಯವಾಗಿ ಲಿಂಗಾಯಿತರು ಲಿಂಗ ಪೂಜೆಯನ್ನು ಮಾಡುತ್ತಿದ್ದರು. ಆದರೆ ಬಡಜನರು ಪೂಜೆಯನ್ನು ಸ್ವಲ್ಪಮಟ್ಟಿಗೆ ಅವರ ಮನೆಯಲ್ಲಿ ಮಾತ್ರ ಆಚರಿಸುತ್ತಾರೆ. ಈ ಜನರು ಆಚರಿಸುವಂತಹ ಸಂದರ್ಭದಲ್ಲಿ ಹನ್ನೊಂದು ದಿನ ಬನ್ನಿ ಪೂಜೆ ಮಾಡಿ ಅದರ ಸುತ್ತಲು ತಿರುಗಿ ಪೂಜೆಯನ್ನು ಮಾಡಿಕೊಂಡು ಬರುತ್ತಿದ್ದರು. ನಂತರ ತಮ್ಮ ತಮ್ಮ ಮನೆಯಲ್ಲಿಯೇ ಹಿರಿಯರನ್ನಾಗಿ ಮಾಡಿಕೊಂಡು ಬಟ್ಟೆಗಳನ್ನು ಏರಿಸಿಕೊಳ್ಳುತ್ತಿದ್ದರು. ಇದು ಈ ಸಮುದಾಯದ ಸಂಪ್ರದಾಯವಾಗಿದೆ. ಆಗಿನ ಕಾಲದಲ್ಲಿ ಎಲ್ಲಾ ಅಮವಾಸ್ಯೆ ಮತ್ತು ಹುಣ್ಣಿಮೆಗಳನ್ನು ಮಾಡುತ್ತಿದ್ದರು.

ನಂತರ ಈ ಹಬ್ಬದಲ್ಲಿ ಗಂಡಸರು, ಹೆಂಗಸರು, ಮಕ್ಕಳು ಎಲ್ಲರೂ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ನಂತರ ಅಲಂಕೃತವಾಗಿ ವೇದಿಕೆಯನ್ನು ಮಾಡಿ ಶ್ರೀದೇವಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿ ಅಲಂಕರಿಸಿ, ಆರಾಧಿಸಿ ನವರಾತ್ರಿ ಕಳೆದ ನಂತರ ವಿಧಿ ಯುಕ್ತವಾಗಿ ನದಿಯಲ್ಲಿ ಪ್ರತಿಮೆಯನ್ನು ವಿಸರ್ಜಿಸಲಾಗುತ್ತದೆ.

ದಸರಾ ಎಂದ ಕೂಡಲೆ ನಮಗೆ ನೆನಪಿಗೆ ಬರುವುದು ಮೈಸೂರು ದಸರಾ. ಇದು ಜಗತ್‌ಪ್ರಸಿದ್ಧವಾಗಿದೆ. ಆದ್ದರಿಂದ ಕರ್ನಾಟಕದಲ್ಲಿ ಇದನ್ನು ನಾಡಹಬ್ಬವೆಂದು ಆಚರಿಸುತ್ತಾರೆ. ನಾಡು ನುಡಿ ಸಂಸ್ಕೃತಿಗಳಿಗೆ ಸಂಬಂಧಿಸಿದ ಕಲೆ, ನೃತ್ಯ, ನಾಟಕ ಉಪನ್ಯಾಸ, ಭಾವಗೀತೆ ಮುಂತಾದವುಗಳ ಮೂಲಕ ನಾಡಿನ ಜನತೆಗೆ ನಾಡಿನ ಹಿರಿಮೆ-ಗರಿಮೆಗಳನ್ನು ಪರಿಚಯಿಸುವ ಕಾರ್ಯ ಶ್ಲಾಘನೀಯವಾದುದು. ಈ ಉತ್ಸವಕ್ಕೆ ನಾಡಹಬ್ಬಕ್ಕೆ ಸೂಕ್ತ ಕಾಲ ಎಂದು ಹೇಳಬಹುದು.

ನಾಡಿನ ಕವಿಗಳು, ಕಲಾವಿದರು, ದಾರ್ಶನಿಕರು ಮುಂತಾದವರ ಬಗ್ಗೆ ಜನರಿಗೆ ಅರಿವು ಮೂಡಿಸಿ ನಾಡಿನ ಜಯ ವಿಜಯ ಪತಾಕೆಗಳನ್ನು ಹಾರಿಸುವಂತಾಗಿ ನವರಾತ್ರಿಯು ಸಹ ನವೋತ್ಸಾಹವನ್ನು ತುಂಬುತ್ತದೆ ಎಂದು ಹೇಳಬಹುದು.

೪.೨.೪. ಶಿವರಾತ್ರಿ

ಈ ಹಬ್ಬವನ್ನು ಸಹ ಎಲ್ಲಾ ಸಮುದಾಯದವರು ಎಲ್ಲಾ ಬುಡಕಟ್ಟಿನವರು ಆಚರಿಸುವಂತಹ ಹಬ್ಬವಾಗಿದೆ. ಈ ಹಬ್ಬವನ್ನು ಮಾಘ ಬಹಳ ಚತುರ್ದಶಿ ಶಿವರಾತ್ರಿಯಾಗಿದೆ. ಈ ಹಬ್ಬದಂದು ಪ್ರಪಂಚಕ್ಕೆ ತಂದೆ ಎನಿಸಿದ ಶಿವನ ಆರಾಧನೆಯೇ ಈ ಶಿವರಾತ್ರಿಯಾಗಿದೆ ಎಂದು ಹೇಳಬಹುದು.

ಶಿವ ಶಿವ ಎಂದರೆ ಸಿಡಿಲೆಲ್ಲ ಬಯಲಾಗಿ
ಕಲ್ಲು ಬಂದೆರಗಿ ಕಡೆಗಾಗಿ | ಎಲೆ ಮನವೆ
ಶಿವನೆಂಬ ಶಬುದ ಬಿಡಬ್ಯಾಡ ||

ಅಂದರೆ ಇದರ ಅರ್ಥ ಶಿವನ ಧ್ಯಾನದಲ್ಲಿ ನಿರತರಾಗಿದ್ದರೆ ಯಾವ ಆಪತ್ತು ಕಾಲವೂ ಬರುವುದಿಲ್ಲ ಎಂಬುದು ನಮ್ಮ ಹಿಂದಿನ ಕಾಲದ ಜನರ ನಂಬಿಕೆ. ನಂತರ ಶಿವನ ಧ್ಯಾನ ಆರಾಧನೆಗಳಿಗೆ ಅತ್ಯಂತ ಪ್ರಸಕ್ತವಾದ ದಿನವೇ ಈ ಶಿವರಾತ್ರಿ ಎಂದು ಹೇಳಬಹುದು.

**ಶಿವರಾತ್ರಿಯ ಆಚರಣಾತ್ಮಕ ಸ್ವರೂಪ**

ಶಿವರಾತ್ರಿಯ ದಿನ ಅರುಣೋದಯಕ್ಕೆ ಎದ್ದು ಸ್ನಾನ ಮಾಡಿ (ತೊರೆ, ಹೊಳೆ, ನದಿ, ಸಮುದ್ರಗಳಲ್ಲಿ) ಶುಭ್ರ ವಸ್ತ್ರವನ್ನುಟ್ಟು ಸಮಸ್ತ ಪಾಪ ನಿವಾರಣೆಗಾಗಿ ಜ್ಞಾನ ಮತ್ತು ಮೋಕ್ಷಕ್ಕಾಗಿ ಶಿವರಾತ್ರಿ ವ್ರತವನ್ನು ಆಚರಿಸುತ್ತಾರೆ. ಒಂದು ದಿನ ಮಠ, ದೇವಾಲಯಗಳಲ್ಲಿ ಶಿವರಾತ್ರಿಯ ಪೂಜೆ ನಡೆಯುತ್ತದೆ ಎಂದು ಹೇಳಬಹುದು. ನಂತರ ಇಲ್ಲಿ ಮಠಗಳಲ್ಲಿ ರಾತ್ರಿಯಿಂದ ಬೆಳಕು ಹರಿಯುವವರೆಗೆ ಹರಿಕಥೆಯನ್ನು ಸ್ವಾಮೀಜಿಗಳು ಹೇಳುತ್ತಾರೆ. ಇದರಿಂದ ಜನರು ಅರಿತುಕೊಂಡು ಜೀವನವನ್ನು ಸಾಗಿಸುತ್ತಾರೆ.

**ಶಿವರಾತ್ರಿಯ ಪುರಾಣ ಕಥೆ**

ಶಿವಲೀಲಾಮೃತದಲ್ಲಿ ಬರುವ ಶಿವರಾತ್ರಿಯ ಕಥೆಯನ್ನು ಸ್ವತಃ ಶಿವನೇ ಪಾರ್ವತಿಗೆ ಹೇಳಿದ್ದಾನಂತೆ. ದೇಶದಲ್ಲಿ ಸದಾಬೇಟೆಯಾಡಿ ಜೀವಿಸುವ ಒಬ್ಬ ಬೇಡನಿದ್ದ. ಒಂದು ದಿನ ಹಗಲೆಲ್ಲ ಅಲೆದರೂ ಅವನಿಗೆ ಬೇಟೆ ಸಿಗಲಿಲ್ಲ. ರಾತ್ರಿ ಒಂದು ಸರೋವರದ ಬಳಿ ಇದ್ದ ಒಂದು ಮರವನ್ನು ಏರಿ ಅಲ್ಲಿಗೆ ನೀರು ಕುಡಿಯಲು ಬರುವ ಪ್ರಾಣಿಗಳನ್ನು ಕೊಲ್ಲಲು ಹೊಂಚುಹಾಕಿದ. ಆಗಿನ ದಿನದಂದು ಶಿವರಾತ್ರಿ ಆಗಿತ್ತು. ಆದರೆ ಬೇಡನಿಗೆ ತಿಥಿ-ಮತಿ ಅವನಿಗೆ ಇರಲಿಲ್ಲ. ಅಂದರೆ ಅವನಿಗೆ ಅರಿವಿಲ್ಲದಂತೆ ಕಣ್ಣಿಗೆ ಅಡ್ಡ ಬಂತೆಂದು ಮರದಡಿಯಲ್ಲಿದ್ದ ಲಿಂಗವನ್ನು ಮುಚ್ಚಿದವು. ಆ ಸಮಯಕ್ಕೆ ಒಂದು ತುಂಬು ಗರ್ಭಿಣಿಯಾದ ಒಂದು ಜಿಂಕೆ ನೀರು ಕುಡಿಯಲು ಬಂದಿತ್ತು. ಬೇಡನು ಬಾಣ ಬಿಡಲು ಹೋದಾಗ ಅದು ತುಂಬಾ ಗರ್ಭಿಣಿಯಾದ ನನ್ನನ್ನು ಕೊಂದು ಬ್ರೂಣ ಹತ್ಯೆಗೆ ಗುರಿಯಾಗಬೇಡ. ಸ್ವಲ್ಪ ಸಮಯದಲ್ಲಿಯೇ ಪ್ರಸವಿಸಿದ ಬಳಿಕ ನಾನಾಗಿಯೇ ಇಲ್ಲಿಗೆ ಬಂದು ದೇಹವನ್ನು ಅರ್ಪಿಸುವೆ ಶಿವನಾಣೆ, ಶಿವನಾಣೆ ಎಂದಿತು. ಬೇಡನು ಶಿವನ ಶಬ್ದ ಕೇಳಿದಾಗ ಜಿಂಕೆಯ ಮೇಲೆ ಕರುಣೆ ಹುಟ್ಟಿ ಅದನ್ನು ಬಿಟ್ಟು ಬಿಟ್ಟನು. ನಿದ್ರೆ ತಡೆಯಲಿಕ್ಕೋಸ್ಕರ ಬಿಲ್ವಪತ್ರೆ ಎಲೆಗಳನ್ನು ಕಿತ್ತು ಎಸೆಯುತ್ತಲೇ ಇದ್ದನು. ನಂತರ ಇನ್ನೊಂದು ಜಿಂಕೆಯು ಬಂದಿತು. ಅದೂ ಸಹ ಬೇಡನನ್ನು ಕುರಿತು ಈ ಮರಿಗಳನ್ನು ನನ್ನ ಪತಿ ಇದ್ದಲ್ಲಿಗೇ ಬಿಟ್ಟು ಬರುವ ತನಕ ಸಂತಯಿಸು ಇಲ್ಲವಾದರೆ ಅವು ಅನಾಥ ವಾಗುತ್ತವೆ ಎಂದಾಗ ಮರುಕ ಹುಟ್ಟಿ ಅದನ್ನು ಬಿಟ್ಟ. ಅನಂತರ ಒಂದು ಗಂಡು ಜಿಂಕೆ ಬಂದಿತು. ಬೇಡನು ಅವುಗಳನ್ನು ಕೊಲ್ಲದೆ ಶಿವನ ಮಹಾತ್ಮೆಯನ್ನು ಅರಿತವನಾಗಿ, ಅದ್ವಿತೀಯ ಶಿವಭಕ್ತನಾಗಿ ಮಾರ್ಪಟ್ಟ ದಿನವನ್ನು ಶಿವರಾತ್ರಿ ಎಂಬುದಾಗಿ ಆಚರಿಸಲಾಗುತ್ತದೆಯೆಂದು ಜನಪದ ಪುರಾಣಗಳು ತಿಳಿಯಪಡಿಸುತ್ತವೆ.

ಶಿವರಾತ್ರಿಯ ಕುರಿತು ಮತ್ತೊಂದು ಕಥೆಯೂ ಪ್ರಚಲಿತದಲ್ಲಿದೆ. ಉಜ್ಜಯಿನಿಯ ಚಂದ್ರಸೇನಾ ದೊರೆ ಮಹಾಶಿವಭಕ್ತನಾಗಿದ್ದ ಪ್ರತಿನಿತ್ಯ ಅಲ್ಲಿಯ ಮಹಾಕಲ್ಲೇಶನನ್ನು ಪೂಜಿಸುತ್ತಿದ್ದರು. ಶಿವಾನುಗ್ರಹದಿಂದ ಅವನ ಅಂಗರಕ್ಷಕನಾದ ಮಣಿಭದ್ರನು ಕೊಟ್ಟ ಚಿಂತಾಮಣಿ ರತ್ನದ ಪ್ರಭಾವದಿಂದ ಇಂದ್ರನನ್ನು ಮೀರಿಸುವಷ್ಟು ಅಷ್ಟೇ ಐಶ್ವರ್ಯ ಗಳಿಸಿ ಶ್ರೀಮಂತನಾದನು. ಚಿಂತಾಮಣಿ ರತ್ನದ ಪ್ರಭಾವ ಕೇಳಿದ ಕೂಡಲೇ ಶತೃಗಳು ರಾಜರುಗಳು

ಆ ರತ್ನ ತಮಗೆ ಬೇಕೆಂದು ಕೇಳಿದರೂ ಅವರ ದೊರೆಯು ಕೊಡಲಿಲ್ಲ. ಇದರಿಂದ ಸಿಟ್ಟಿಗೆದ್ದು ಅವರೆಲ್ಲಾ ಸೇರಿ ರಾಜನ ಮೇಲೆ ಕೆಂಡಕಾರಿದರು. ಅಂದು ಶನಿವಾರ ಶಿವರಾತ್ರಿಯ ದಿನ ಅನಿರೀಕ್ಷಿತವಾಗಿ ದಾಳಿಯಿಂದ ದಿಕ್ಕುತೋಚದೆ ರಾಜ ಮಹಾಬಲೇಶ್ವರನನ್ನೇ ಧ್ಯಾನಿಸಿ ಪೂಜೆಯಲ್ಲಿ ನಿರತನಾದನು.

ಆ ದೇವಾಲಯದ ಹೊರವಲಯದಲ್ಲಿ ಒಬ್ಬ ಬಡವಿಯೊಬ್ಬಳು ಗುಡಿಸಲಿನಲ್ಲಿ ವಾಸಮಾಡುತ್ತಿದ್ದಳು. ಅವಳ ಐದು ವರ್ಷದ ಮಗ ಶ್ರೀಕರನೆಂಬುವನು ರಾಜನು ಮಾಡುವ ಪೂಜೆ ನೋಡಿ, ತಾನ ಮಣ್ಣಿನ ಲಿಂಗಗಳನ್ನು ಮಾಡಿ ಪೂಜಿಸುತ್ತಿದ್ದ. ಆಗ ತಾಯಿಯು ಮಗನ ಚೇಷ್ಟೆಯನ್ನು ಕಂಡು ಲಿಂಗವನ್ನು ಕಿತ್ತೆಸೆಯಲು ಹೊರಟಾಗ, ಶ್ರೀಕರನು ಅಯ್ಯೋ ಎಂದು ಹೇಳುತ್ತಾ ಸ್ವಾಮಿ ನನ್ನ ಪೂಜೆಯನ್ನು ಸ್ವೀಕರಿಸು ಎಂದನು. ಆಗ ತಾಯಿಯು ಅವನಿಗೆ ಒಳ್ಳೆಯ ಬುದ್ಧಿಯನ್ನು ಕೊಡು ಶಿವನೆ ಎಂದು ತನ್ನ ತಾಯಿ ಬೇಡಿಕೊಂಡಳು. ಆಗ ಆ ಮಣ್ಣಿನ ಲಿಂಗಗಳೆಲ್ಲಾ ಹೊಳೆಹೊಳೆಯುವ ಸ್ಪಟಿಕದ ಲಿಂಗಗಳಾಗಿ ಅದರ ಮೇಲೆ ಚಿನ್ನದ ದೇವಾಲಯಗಳು ನಿರ್ಮಾಣವಾಯಿತು.

ಈ ಸುದ್ದಿಯು ಗಾಳಿಯಂತೆ ಎಲ್ಲಾ ಕಡೆ ಪ್ರಸರಿಸಿತು. ಕೇಳಿದವರಿಗೆಲ್ಲಾ ಆಶ್ಚರ್ಯಕರವಾದ ಸಂಗತಿಯಾಗಿದೆ. ಶತೃರಾಜರು ಈ ಸುದ್ದಿಯನ್ನು ಕೇಳಿ ಆಶ್ಚರ್ಯಗೊಂಡು ವೈರ ಬಿಟ್ಟು ಶಿವ ದರ್ಶನಕ್ಕೆ ಬಂದರು. ಚಂದ್ರಸೇನನೊಂದಿಗೆ ಮಿತ್ರತ್ವ ಬೆಳೆಸಿ ಎಲ್ಲಾ ಒಟ್ಟಾಗಿ ಶಿವರಾತ್ರಿಯಂದು ಶಿವಪೂಜೆ ಮಾಡಿ, ಭಜನೆಯನ್ನು ಮಾಡಿ ಪಂಚಾಕ್ಷರಿಯ ಕೀರ್ತನೆಗಳು ಅತ್ಯಂತ ವೈಭವದಿಂದ ನಡೆಸಿದರು. ಅವರೆಲ್ಲರಿಗೂ ಶಿವಾನುಗ್ರಹದಿಂದ ಇಹಪರ ಸುಖ ಸಂಪತ್ತುಗಳು ದೊರಕಿದವು. ಶಿವಾರಾಧನೆಗೆ ಒಡವೆಗಳು, ಐಶ್ವರ್ಯ, ಆಡಂಬರ ಯಾವುದೂ ಬೇಕಿರಲಿಲ್ಲ. ಬೆಟ್ಟದ ಪತ್ರೆ, ಬಾವಿಯ ನೀರು ಎಲ್ಲಕ್ಕಿಂತ ಹೆಚ್ಚಾಗಿ ಒಳ್ಳೆಯ ಭಾವನೆ ಇದ್ದರೆ ಸಾಕು ಎಂದು ಆಶಯವಾಗಿದೆಯೆಂದು ಹೇಳಬಹುದು.

ಆದರೆ ಇಂದು ಶಿವರಾತ್ರಿ ಎಂದ ಕೂಡಲೆ ಕೆಲವರಿಗೆ ಮೋಜಿನ ಹಬ್ಬವಾಗಿರುತ್ತದೆ. ಜಾಗರಣೆಯ ಹೆಸರಿನಲ್ಲಿ ಜೂಜಾಟ, ಮೋಜು, ಬೇಕಾಬಿಟ್ಟಿ ಓಡಾಟ, ಕಲ್ಲುತೂರಾಟ, ಕಳ್ಳತನವನ್ನು ನಡೆಸುತ್ತಾ ವೃಥಾ ಕಾಲಹರಣ ಮಾಡುತ್ತಿದ್ದರು. ಅಂದರೆ ಒಟ್ಟಾರೆಯಾಗಿ ನಿದ್ರೆಗೆಡುವುದೊಂದು ಕಂದಾಚಾರದಂತೆ ಪರಿವರ್ತನೆಗೊಂಡಿದೆಯೆನ್ನಬಹುದು. ಆದರೆ ಶಿವರಾತ್ರಿಯ ಮೂಲ ಆಶಯ ತಮಸೋ ಜ್ಯೋತಿರ್ಗಮಯ ಎನ್ನುವುದಾಗಿದೆ. ರಾತ್ರಿಯ ತಮಸ್ಸಿನಿಂದ ಬೆಳಕಿನ ಕಡೆಗೆ ಅಂದರೆ ಸುಜ್ಞಾನದ ಕಡೆಗೆ ಸಾಗುವ ಆಶಯದ ಹಬ್ಬವಾಗಿದೆಯೆನ್ನಬಹುದು.

**೪.೨.೫. ದೀಪಾವಳಿ**

ದೇಶಾದ್ಯಂತ ಆಚರಣೆಯಲ್ಲಿರುವ ದೀಪಾವಳಿಯು ಒಂದು ರಾಷ್ಟ್ರೀಯ ಹಬ್ಬ. ಇದಕ್ಕೆ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಅದೆಂದರೆ ದೀಪಾಲಿಕಾ, ದಿವಾಲೀ, ದೀಪಾವಳಿ ಎಂಬ ಹೆಸರುಗಳಿಂದ ಕರೆಯುತ್ತಾರೆ. ದೀಪಾವಳಿಯು ಬಹಳ ಪುರಾತನವಾದ ಕಾಲದಿಂದಲೂ ಆಚರಿಸುವ ಆಚರಣೆಯಾಗಿದೆ. ಶಿಲಾಶಾಸನಗಳಲ್ಲೂ ಈ ಹಬ್ಬದ ಉಲ್ಲೇಖಗಳು ಇವೆ.

ದೀಪಾವಳಿಯು ಕತ್ತಲೆಯಿಂದ ಬೆಳಕಿನ ಕಡೆಗೆ ಹೋಗಲು ಪ್ರೇರೇಪಿಸುವಂತಹ ಆಶಯಗಳನ್ನು ಹೊಂದಿದ ಆಚರಣೆಯಾಗಿದೆ. ಕತ್ತಲೆಗೂ ಮತ್ತೂ ಬೆಳಕಿಗೂ ಯುಗಯುಗಳ ಸಂಘರ್ಷ. ನಿರಂತರ ಹೋರಾಟ ನಡೆದೇ ಇದೆ. ಕತ್ತಲಿನೊಡನೆ ಹೋರಾಡಿ ಬೆಳಕು ಗೆಲ್ಲುವುದರ ಸಂಕೇತ ಈ ದೀಪಾವಳಿ ಆಚರಣೆಯಾಗಿದೆ. ಬೆಳಕು ಎಲ್ಲಾ ಚೇತನಗಳ ಅವಿಷ್ಕಾರ. ಆಧಾರ. ಕ್ರಿಯಾಶಕ್ತಿ. ಬೆಳಕೇ ಬದುಕು ಆಗಿದೆ. ಆದ್ದರಿಂದ ಬೆಳಕಿನ ಆರಾಧನೆಯೇ ಈ ದೀಪಾವಳಿಯ ಹಬ್ಬವಾಗಿದೆ. ದೀಪಗಳ ಸಾಲುಗಳನ್ನು ದೀಪಾವಳಿ ಎಂದು ಕರೆಯಬಹುದು.

**೪.೨.೬. ಕಣಿಮೆ ದುರ್ಗಮ್ಮನ ಜಾತ್ರೆ**

ಈ ಕಣಿಮೆ ದುರ್ಗಮ್ಮನ ಜಾತ್ರೆಯನ್ನು ಕೇವಲ ಮಾದಿಗ ಸಮುದಾಯದವರು ಮಾತ್ರ ಆಚರಿಸುತ್ತಾರೆ. ಮೊಳಕಾಲ್ಮೂರು ಪರಿಸರಕ್ಕೆ ಸಂಬಂಧಿಸಿದಂತೆ ಈ ಹಬ್ಬದ ಜಾತ್ರೆಯನ್ನು ಆಚರಿಸುತ್ತಾರೆ. ಅಂದರೆ ಈ ಜಾತ್ರೆಯನ್ನು

ಐದುವರ್ಷಕ್ಕೆ ಒಂದು ಸಾರಿ ಅಥವಾ ಮೂರು ವರ್ಷಕ್ಕೆ ಒಂದು ಸಾರಿ ನಡೆಯುವಂತಹ ಹಬ್ಬವಾಗಿದೆ. ಈ ಹಬ್ಬದಲ್ಲಿ ಆ ಊರಿನ ನಾಲ್ಕು ಜನ ದೈವಸ್ಥರು ಒಂದು ತಾಳೆಮರವನ್ನು ನೋಡಿಕೊಂಡು ಬರುತ್ತಾರೆ. ಬಂದನಂತರ ಗುಡಿಯ ಕಟ್ಟೆಗೆ ಕುಳಿತುಕೊಂಡು ಊರಿನ ದೈವಸ್ಥರನ್ನೆಲ್ಲಾ ಕರೆಯಿಸಿ ಒಂದು ದಿನ ವಾರವನ್ನು ಗೊತ್ತು ಪಡಿಸಿ ಅಂದು ಆ ತಾಳೆ ಮರಕ್ಕೆ ಪೂಜೆ ಮಾಡಿ ಆ ಮರವನ್ನು ಕಡಿಯುತ್ತಾರೆ. ಆ ಮರವನ್ನು ಕಡಿದ ನಂತರ ಆ ತಾಳೆಮರದ ಕಟ್ಟಿಗೆಗಳನ್ನು ತೆಗೆದುಕೊಂಡು ಬಡಿಗಿಯವನ ಹತ್ತಿರಕ್ಕೆ ತೆಗೆದುಕೊಂಡು ಹೋಗುತ್ತಾರೆ. ಹೋದನಂತರ ಅವನು ಕನಸಿನಲ್ಲಿ ಇರುವಂತಹ ದೇವರ ಮೂರ್ತಿಯನ್ನು ಆ ಕಟ್ಟಿಗೆಯ ಮೂಲಕ ಕೆತ್ತುತ್ತಾನೆ. ಏಕೆಂದರೆ ಐದು ವರ್ಷಕ್ಕೆ ಒಂದು ಬಾರಿ ನಡೆಯುವುದರಿಂದ ಹೊಸ ಕಟ್ಟಿಗೆಯಿಂದ ದೇವರು ಆಗಬೇಕು ಎಂದು ಆ ಊರಿನ ಒಂದು ನಂಬಿಕೆ ಪ್ರತೀತಿಯಾಗಿದೆ.

ತದನಂತರ ಐದು ವರ್ಷ ಆಗುವುದಕ್ಕಿಂತ ಮುಂಚಿತವಾಗಿ ಒಂದು ಸಣ್ಣದಾದ ಕೋಣವನ್ನು ಊರೆಲ್ಲಾ ಮೆರವಣಿಗೆ ಮಾಡಿ ಆ ಕೋಣವನ್ನು ಊರು ಮಾರೆಮ್ಮನಿಗೆ ಬಿಡುತ್ತಾರೆ. ಆಗ ಐದು ವರ್ಷ ಆದ ಮೇಲೆ ಆ ಕೋಣವನ್ನು ಎಲ್ಲೇ ಹೋದರೂ ಸಹ ಅದನ್ನು ಹಿಡಿದುಕೊಂಡು ಬಂದು ಅದನ್ನು ಮರವೊಂದಕ್ಕೆ ಕಟ್ಟಿಹಾಕಿ ಅರೆಉಪವಾಸದಿಂದ ಅದರ ಶಕ್ತಿಗುಂದಿಸಲಾಗುತ್ತದೆ. ಜಾತ್ರೆಗೆ ಊರಿನ ಜನ ಅಕ್ಕಪಕ್ಕದ ಬೀಗರು ಬಿಜ್ಜರನ್ನು ಆಹ್ವಾನಿಸುತ್ತಾರೆ. ಆ ಊರಿನಲ್ಲಿನ ಮಾದಿಗ ಸಮುದಾಯದಲ್ಲಿ ಜಾತ್ರೆಯ ಸಂದರ್ಭದಲ್ಲಿ ಎಲ್ಲ ಪ್ರಾಣಿಗಳನ್ನು ಬಲಿಕೊಡುವ ಸಂಪ್ರದಾಯವಿತ್ತೆಂದು ತಿಳಿದುಬರುತ್ತದೆ. ದುರುಗಮ್ಮ ದೇವಿಗೆ ಹರಕೆ ಹೊತ್ತವರು ಹರಕೆ ತೀರಿಸಿಕೊಳ್ಳುತ್ತಾರೆ. ಹರಕೆಯಾಗಿ ಬೆಳ್ಳಿ ಅಥವಾ ಒಂದು ಬೆಳ್ಳಿ ಗಂಟೆಯನ್ನು ತಂದು ತೂಗು ಹಾಕಲಾಗುವುದು. ಮಾದಿಗ ಕೇರಿಯಲ್ಲಿರುವಂತಹ ಜನರೆಲ್ಲರೂ ಬಂಡಿಗಳನ್ನು ಕಟ್ಟಿಕೊಂಡು ಕಡೆಮೆ ದುರುಗಮ್ಮನ ಗುಡಿಯ ಹತ್ತಿರ ಬಂದು ಸೇರುತ್ತಾರೆ. ಬಂದ ನಂತರ ದುರುಗಮ್ಮನ ಗುಡಿಯ ಮುಂದೆ ಪಟ್ಟದ ಕೋಣವನ್ನು ಹಿಡಿದುಕೊಂಡು ಬಂದು ನಿಲ್ಲಿಸುತ್ತಾರೆ. ಆಗ ಅದಕ್ಕೆ ಪೂಜೆಮಾಡಿ ಹೂವಿನ ಹಾರವನ್ನು ಹಾಕಿ ಆ ಕೋಣವನ್ನು ಎಂಟ್ಹತ್ತು ಜನ ಬಲಾಢ್ಯ ವ್ಯಕ್ತಿಗಳು ಹಿಡಿದುಕೊಂಡಿರುತ್ತಾರೆ. ಕೋಣವನ್ನು ಗುಡಿಯ ಮುಂದೆ ಕಡಿಯಲಾಗುತ್ತದೆ. ಕಡಿದ ನಂತರ ಅದರ ರಕ್ತವನ್ನು ಹಿಡಿದು ಅದನ್ನು ಓಕುಳಿಯಾಗಿ ಮಾಡಿ ಚೆಲ್ಲುತ್ತಾರೆ. ನಂತರ ಅದರ ಶಿರವನ್ನು ಆ ಗುಡಿಯ ಮುಂದೆ ಇಟ್ಟು ದೇಹವನ್ನು ಬೇರೆ ಕಡೆಗೆ ತೆಗೆದುಕೊಂಡು ಹೋಗಿ ಅದನ್ನು ಅಂದರೆ ಅದರ ಚರ್ಮವನ್ನು ಬಿಡಿಸಿ ಅದರ ಮಾಂಸವನ್ನು ಬೇರ್ಪಡಿಸಿ ಹೊರಗೆ ತೆಗೆದು ಅದನ್ನು ಎಷ್ಟು ಮಾದಿಗರ ಮನೆಗಳಿವೆಯೋ ಅಷ್ಟು ಮನೆಗಳಿಗೂ ಪಾಲು ಹಾಕಿ ಎಲ್ಲಾ ಮನೆಗಳಿಗೂ ಹಂಚುತ್ತಾರೆ. ತಾಜಾ ಮಾಂಸವನ್ನು ಬೇಯಿಸಿ ಅಡುಗೆ ಮಾಡಿ ತಿನ್ನುತ್ತಿದ್ದರು.

ಕೋಣದ ಮಾಂಸವನ್ನು ಸೇವಿಸುವುದರ ಮೊದಲು ಅಭ್ಯಾಸವಿರುವವರು ಮದ್ಯಪಾನ ಮಾಡುತ್ತಾರೆ. ವಿವಿಧ ರೀತಿಯ ಮನರಂಜನೆಯ ಆಟಗಳನ್ನು ಆಡುತ್ತಾರೆ. ಸಂಜೆಯಾಗುತ್ತಿದ್ದಂತೆಯೇ ಊಟ ಮಾಡಿ ಮಿಕ್ಕಿರುವುದನ್ನು ಮನೆಗೆ ಕೊಂಡೊಯ್ಯುವಂತಿರಲಿಲ್ಲ. ಅದನ್ನು ಅಲ್ಲಿಯೇ ಚೆಲ್ಲಿ ಇಲ್ಲವೇ ಗುಣಿ ತೋಡಿ ಅದರಲ್ಲಿ ಹಾಕಿ ಮುಚ್ಚಿಬಿಡುತ್ತಿದ್ದರು. ನಂತರ ಊರಿಗೆ ಹಿಂದಿರುಗಲಾಗುತ್ತದೆ. ಊರಿಗೆ ಬಂದಾಗ ಜಾತ್ರೆ ಮಾಡಲಾಗುತ್ತದೆ. ಈ ಜಾತ್ರೆ ಮತ್ತು ಆಚರಣೆಯನ್ನು ಹಯ್ಯಾಗಿ ಮೊಳಕಾಲ್ಮೂರು ತಾಲ್ಲೂಕಿನ ನೇರ್ಲಹಳ್ಳಿ ಗ್ರಾಮದಲ್ಲಿ ಈ ಹಬ್ಬವನ್ನು ಆಚರಿಸುತ್ತಾರೆ ಎಂದು ಹೇಳಬಹುದು. ಈ ಆಚರಣೆಯ ಸಂದರ್ಭದಲ್ಲಿ ಮಾದಿಗ ಸಮುದಾಯದ ಎಲ್ಲರೂ ಸೇರುವುದು ವಿಶೇಷ.

### ೪.೨.೭. ಗೌರಸಮುದ್ರದ ಮಾರೆಮ್ಮನ ಜಾತ್ರೆ

ಚಳ್ಳಕೆರೆಯಿಂದ ಉತ್ತರ ಈಶಾನ್ಯಕ್ಕೆ ೨೯ ಕಿ. ಮೀ. ದೂರದ ತಳಕು ಹೋಬಳಿಗೆ ಸೇರಿದ ಗೌರಸಮುದ್ರ ಎಂಬ ಹಳ್ಳಿಯಲ್ಲಿ ಮಾರೆಮ್ಮ ದೇವಿಯ ಗುಡಿ ಇದೆ. ಐತಿಹಾಸಿಕವಾಗಿ ಮತ್ತು ಧಾರ್ಮಿಕವಾಗಿ ಈ ಗ್ರಾಮ ಬಹಳ ಮಹತ್ವ ಪಡೆದುಕೊಂಡಿದೆ. ಈ ಊರಿನಲ್ಲಿ ಮಾರೆಮ್ಮ ದೇವತೆಯ ಬಹುದೊಡ್ಡ ಜಾತ್ರೆ 'ತುಮ್ಮಲ' ಎಂಬ ಸ್ಥಳದಲ್ಲಿ ನಡೆಯುತ್ತದೆ. ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಗಡಿಭಾಗದಲ್ಲಿ ನಡೆಯುವ ಈ ಮಾರಿ ಜಾತ್ರೆಗೆ ಸುಮಾರು ೨೫ ರಿಂದ ೩೦ ಸಾವಿರ ಜನಸಂಖ್ಯೆ ಸೇರುತ್ತದೆ. ಚಿತ್ರದುರ್ಗ ಜಿಲ್ಲೆಯ ಬಹುದೊಡ್ಡ

'ಮಾರಿಜಾತ್ರೆ' ಎಂದೇ ಪ್ರಖ್ಯಾತವಾಗಿದೆ. ಈ ಪ್ರದೇಶದಲ್ಲಿ ವಾಸಿಸುವ ಮಾದಿಗ ಸಮುದಾಯ ಮತ್ತು ಹೊಲೆಯ ಜನಾಂಗದವರು ಈ ಜಾತ್ರೆಗೆ ಹೆಚ್ಚಿನ ಸಂಖ್ಯೆಯಲ್ಲಿ ಬಂದು ಸೇರುತ್ತಾರೆ. ಈ ಎರಡು ಸಮುದಾಯಗಳಿಗೆ ಕುಲದೇವತೆಯಾಗಿ ಮತ್ತು ಹಲವಾರು ಪಾಳೆಯಗಾರರ ಇತಿಹಾಸದಲ್ಲಿ ಹಿರೇಗೌರಸಮುದ್ರ ಮಾರಮ್ಮನ ವಿಷಯ ಪ್ರಸ್ತಾಪವಾಗಿದೆ. ಮಾದಿಗರ ಎತ್ತಪ್ಪ ಮತ್ತು ಪುರಾಣ ಕಥೆಗಳಲ್ಲಿ ಗೌಸಂದ್ರದ ಮಾರಕ್ಕನ ಪಾತ್ರ ಬಹುಮುಖ್ಯವಾಗಿದೆ. ಮಾದಿಗ ಮತ್ತು ಹೊಲೆಯ ಜನಾಂಗದ ಕಥೆ, ಪುರಾಣಗಳಲ್ಲಿ ಗೌರಸಮುದ್ರದ ಮಾರಕ್ಕ ' ಕಣಿ' ಹೇಳುವ ಕೊರವಂಜಿ ವೇಷದಲ್ಲಿ ಪ್ರತ್ಯಕ್ಷಳಾಗುತ್ತಾಳೆ.

ನವಶಕ್ತಿಯಲ್ಲಿ ಈಕೆ ಮಾರಿ ಇತರರು ಆದಿಶಕ್ತಿ, ಅಂಕಾಲಮ್ಮ, ಪೀಠಾರಿ, ಭದ್ರಕಾಳಿ, ದುರ್ಗೆ, ಚಾಮುಂಡಿ, ಪೂರ್ಣ ಮತ್ತು ಪುಷ್ಕಲಾ ಈಕೆಯ ವಿಚಾರವಾಗಿ ಹಲವಾರು ಕಡೆ ಹಲವಾರು ಕಥೆಗಳು ಪ್ರಚಲಿತವಾಗಿವೆ. ಕಷ್ಟಕೋಟಲೆಗಳಿಗೆ ಒಳಗಾದ ಭಕ್ತಾದಿಗಳಿಗೆ ಅಮ್ಮನಾಗಿ ಹರಸಿ ಆರ್ಶೀವಾದಿಸಿದ ಕಥೆಗಳಂತೂ ಈ ಪ್ರದೇಶದಲ್ಲಿ ನೂರಾರು ಕೇಳಿ ಬರುತ್ತವೆ. ಹಲವು ಸಮುದಾಯಗಳು ಅವರ ಜನಾಂಗದ ಕಥೆ ಪುರಾಣಗಳಲ್ಲಿ ಗೌರಂಸದ್ರ ಮಾರಕ್ಕ ಕಣಿ ಹೇಳುವ ಕೊರವಂಜಿ ವೇಷದಲ್ಲಿ ಕಾಣಿಸಿಕೊಳ್ಳುವುದರಿಂದ ಈ ಜಾತ್ರೆಯಲ್ಲಿ ಕೊರವಂಜಿಗಳಿಗೆ ವಿಶೇಷ ಗೌರವ ಕೊಟ್ಟು ಕಣಿ ಕೇಳುವ ಸಂಪ್ರದಾಯ ಮಾದಿಗ ಮತ್ತು ಹೊಲೆಯರಲ್ಲಿ ಬೆಳೆದು ಬಂದಿದೆ. ಆಂಧ್ರ ಪ್ರದೇಶದಲ್ಲಿ ಕರ್ನಾಟಕಕ್ಕೆ ವಲಸೆ ಬಂದ ಕೊರಚರ ಹೆಂಗಸರು ಕೊರವಂಜಿ ಪುಟ್ಟಿ ಹೊತ್ತು ಕಣಿ ಹೇಳಿಕೊಂಡು ತಿರುಗುವ ಸುಮಾರು ೨೦ ರಿಂದ ೪೦ ಕೊರವಂಜಿಗಳನ್ನು ಈ ಜಾತ್ರೆಯಲ್ಲಿ ಗುರುತಿಸಬಹುದು.

ಈ ಎರಡು ಸಮುದಾಯದವರು ಕಣಿ ಕೇಳುವ ಈ ಪದ್ಧತಿಯು ಬಹುಹಿಂದಿನಿಂದಲೂ ಬೆಳೆದು ಬಂದಿದೆ. ಅದೇ ರೀತಿ ಹೊಲೆಯರು ಪೂಜಾರಿಗಳು ಗಣೆ ಊದಿ ಕಣಿ ಹೇಳುವುದನ್ನು ಕೂಡ ಈ ಸಮುದಾಯಗಳು ಬಲವಾಗಿ ನಂಬುತ್ತವೆ. ಗೌರಸಮುದ್ರದ ಮಾರಮ್ಮನ ಜಾತ್ರೆ ಪ್ರಾರಂಭವಾಗುವುದೇ ಅಮವಾಸ್ಯೆಯ ನಂತರ ಗೌರಿ ಗಣೇಶನ ಹಬ್ಬದ ಸಂದರ್ಭದಲ್ಲಿ. ಹಿಂದಿನ ದಿನ ಗೌರಿ ಬರುತ್ತಾಳೆ. ಮರುದಿನ ಗಣಪತಿ ಬರುತ್ತಾನೆ ಎಂಬ ನಂಬಿಕೆಯಿದೆ. ಅದೇ ಸಮಯಕ್ಕೆ ಗೌರಸಮುದ್ರದಲ್ಲಿ ಗೌರೀದೇವಿ ಬರುತ್ತಾಳೆ. ಅವಳೇ ಮಾರಮ್ಮ ಎಂದು ಇಲ್ಲಿನ ಪ್ರತೀತಿ ಇದೆ. ಆದ್ದರಿಂದಲೇ ಗೌರಸಮುದ್ರಕ್ಕೆ ಗೌರಿಸಂದ್ರ ಎಂದು ಕರೆಯುತ್ತಾರೆ.

ಬಾದ್ರಪದ ಮಾಸದ ಮೊದಲನೆಯ ಮಂಗಳವಾರ ಗೌರಸಮುದ್ರದಲ್ಲಿ ಮಾರಮ್ಮನ ಜಾತ್ರೆ ಮಾಡುವುದರಿಂದ ಆ ದಿನ ಊರೊಳಗಿರುವ ಗುಡಿಯಲ್ಲಿ ಮಾರಮ್ಮನ ಬುಟ್ಟಿಗೆ ಅಲಂಕಾರ ಮಾಡುತ್ತಾರೆ. ನಿಡಗಲ್ಲಿನಿಂದ ಹೂ ಬಂದ ಮೇಲೆ ಗೌಸಂದ್ರ ಮಾರಮ್ಮ ಹೊರಡುತ್ತಾಳೆ. ಅಕ್ಕರಾಯಮ್ಮನ ಅವತಾರ ಗೌರಸಮುದ್ರದ ಮಾರೆಮ್ಮ ಎಂದು ಹೇಳುತ್ತಾರೆ. ಗೌರಸಮುದ್ರಕ್ಕೆ ವಹೋದಿ ಮಠ ಎಂದು ಕರೆಯುತ್ತಾರೆ. ಸಾಲಿಗ್ರಾಮಗಳಿಟ್ಟು ಬೆತ್ತದ ಬುಟ್ಟಿಗೆ ಕೆಂಪು ವಸ್ತ್ರ ಸುತ್ತಿ, ಬೆಳ್ಳಿ, ಬಂಗಾರದ ಆಭರಣಗಳನ್ನು ತೊಡಿಸಿ ದೇವರ ಪೂಜಾರಿ ತಲೆಯ ಮೇಲೆ ಹೊತ್ತು ಕೊಂಡು ಸಾಗುತ್ತಾನೆ. ಸಕಲ ವಾದ್ಯ ಮೇಳಗಳೊಂದಿಗೆ ಸುಮಾರು ೨೮ ಕಿ.ಮೀ. ದೂರವಿರುವ 'ತುಮ್ಮ' ಕಡೆಗೆ ಮಾರಮ್ಮನ ಹೊತ್ತ ಪೂಜಾರಿ ಮತ್ತು ಜನ ಸಮೂಹ ಓಡುತ್ತಿರುತ್ತಾರೆ. ದಾರಿ ಮಧ್ಯೆ ಬಳೆಗಾರನ ಕಟ್ಟೆ ಹತ್ತಿರ ದೇವರನ್ನು ನಿಲ್ಲಿಸಿ ಗದ್ದಿಗೆ ಮಾಡಿ ನಂತರ ತುಮ್ಮ ಕಡೆಗೆ ಮಾರಮ್ಮ ಬರುತ್ತಾಳೆ. 'ತುಮ್ಮ' ಅಂದರೆ ಅಡವಿ ಎಂದರ್ಥ. ಹಿಂದಿನ ಕಾಲದಲ್ಲಿ ಈ ಪ್ರದೇಶ ದೊಡ್ಡ ಅರಣ್ಯವಾಗಿತ್ತಂತೆ. ಮತ್ತೊಂದು ಅರ್ಥದಲ್ಲಿ ಮಾರಮ್ಮ ಎಂದರೆ 'ದೊಂಬಿ ಕಾಳಗ' ಗೊಂದಲದ ಸ್ಥಳವೆಂದು ಅರ್ಥವಿದೆ.

ಸುಮಾರು-ಎರಡು ಗಂಟೆಯ ವೇಳೆಗೆ ಮಾರಮ್ಮ 'ತುಮ್ಮ'ಗೆ ಬರುವಾಗ ತಳಕು ಹೋಬಳಿ ಸುತ್ತ ಮುತ್ತಲಿನ ರೈತಾಪಿ ಜನರು ತಮ್ಮ ಹೊಲಗದ್ದೆಗಳಲ್ಲಿ ಬೆಳೆದಿದ್ದ ಬೆಳೆಗಳನ್ನು ಅದರಲ್ಲೂ ಉಳ್ಳಾಗಡ್ಡೆ ಮತ್ತು ಕೋಳಿಮರಿಗಳನ್ನು ತಂದು ದೇವಿಗೆ ತೂರುತ್ತಾರೆ. ಬೆಳೆದ ಬೆಳೆಗಳನ್ನು ತೂರಿದರೆ ಫಸಲು ಚೆನ್ನಾಗಿ ಬರುತ್ತದೆಂದೂ, ಕೋಳಿಮರಿಗಳನ್ನು ತೂರಿದರೆ ಕೋಳಿಗಳ ಸಂತತಿ ಹೆಚ್ಚುತ್ತದೆಂದು ಇಲ್ಲಿಯ ಭಕ್ತಾದಿಗಳ ನಂಬಿಕೆಯಾಗಿದೆ. ದೇವರು ತುಮ್ಮಗೆ ಬಂದು ಪೌಳಿಯಲ್ಲಿ ಗದ್ದಿಗೆ ಮಾಡಿದ ನಂತರ, ಪೌಳಿಯ ಮುಂಭಾಗ ಕರಿಬಣ್ಣದ ಮೇಕೆ ಹೋತವನ್ನು ವಾಸೆ ಕೊಯ್ಯುತ್ತಾರೆ. ಈ ಮೇಕೆ ಹೋತಗೆ ಪೋತರಾಜ ಎನ್ನುತ್ತಾರೆ. ವಾಸಕೊಯ್ದಾಗ ಬಲಿಕೊಟ್ಟಾಗ ಎಲ್ಲರೂ ಸೂರ್ಯನ ಮುಕ್ಕು ಎಂದು ಸೂರ್ಯನಿಗೆ ನಮಸ್ಕಾರ ಮಾಡುತ್ತಾರೆ. ಹೀಗೆ ಸೂರ್ಯ ನಮಸ್ಕಾರ ಮಾಡುವುದರಿಂದ ಮಾದಿಗರ ಮೂಲ ಪುರುಷರಲ್ಲಿ ಒಬ್ಬನಾದ ದುರುಗಪ್ಪ ಎಂಬುವನಿಗೆ ಗೌರವ

ಸಲ್ಲಿಸಿದಂತಾಗುತ್ತದೆ ಎಂಬ ಉದ್ದೇಶದಿಂದ ಸಾಂಪ್ರದಾಯಿಕವಾಗಿ ಈ ಪದ್ಧತಿಯನ್ನು ಆಚರಿಸುತ್ತಾರೆ. ವಾಸೆಕೊಯ್ದು ಮಾಂಸವನ್ನು ದುರುಗಪ್ಪನ ಬೆಡಗಿನ ಅಣ್ಣ ತಮ್ಮಂದಿರು ಮಾತ್ರ ಅಡಿಗೆ ಮಾಡಿ ಊಟ ಮಾಡುತ್ತಾರೆ. ಆಕಸ್ಮಿಕವಾಗಿ ಉಳಿದ ಮಾಂಸ ಮತ್ತು ಮೂಳೆ, ಚರ್ಮ ಮುಂತಾದವುಗಳನ್ನು ಗುಂಡಿಮಾಡಿ ನೆಲದಲ್ಲಿ ಮುಚ್ಚುತ್ತಾರೆ. ವಾಸೆಕೊಯ್ಯುವ ಸಂಪ್ರದಾಯವನ್ನು ಪ್ರತಿವರ್ಷ ಗೌರಸಂದ್ರದಲ್ಲಿ ಆಚರಿಸುತ್ತಾರೆ.

ವಾಸೆಕೊಯ್ದ ನಂತರ ಹರಕೆ ಹೊತ್ತ ಭಕ್ತಾದಿಗಳು ಓಟ್ಟಿನಾರತಿ ಬೇವಿನ ಸೀರೆ, ಬಾಯಿ ಬೀಗ, ದಿಂಡುಳ್ಳಿ ಮೊದಲಾದ ಸೇವೆಗಳನ್ನು ಸಲ್ಲಿಸಿ ಪೌಳಿ ಸುತ್ತ ಪ್ರದಕ್ಷಿಣೆ ಹಾಕುತ್ತಾರೆ. ಭಕ್ತಾದಿಗಳು ತೊಟ್ಟು ಬಿಟ್ಟ ಬೇವಿನ ಸೊಪ್ಪಿನ ಉಡುಗೆ ಸುಮಾರು ಒಂದೆರಡು ಲಾರಿಗಳಷ್ಟಾದರೂ ಪೌಳಿಯ ಸುತ್ತಮುತ್ತ ಬಿದ್ದಿರುತ್ತದೆ. ಹೊಸ ಮಣ್ಣಿನ ಗಡಿಗೆಯಲ್ಲಿ ಈಚಲ ಹೆಂಡವನ್ನು ತುಂಬಿಕೊಂಡು ಘಟಪೂಜೆ ಎಂದು ಮಾಡಿ ಮಾರಮ್ಮನಿಗೆ ಅರ್ಪಿಸುತ್ತಾರೆ. ಹೆಂಡವನ್ನು ಹಾಲು ಎಂದೇ ಕರೆಯುತ್ತಾರೆ. ಸಾವಿರಾರು ಕುರಿ, ಕೋಳಿ, ಕೋಣ, ಮೇಕೆಗಳನ್ನು ಇದೇ ಸಂದರ್ಭದಲ್ಲಿ ಮಾರಮ್ಮಗೆ ಬಲಿಕೊಟ್ಟು ಮಾಂಸದ ಅಡಿಗೆ ಮಾಡಿ ಜಾತ್ರೆಯಲ್ಲಿ ಊಟಮಾಡುತ್ತಾರೆ. ಜೊತೆಗೆ ಸಸ್ಯಹಾರಿಗಳು ಕೂಡ ಹುಗ್ಗಿ, ಹೋಳಿಗೆ, ಅನ್ನ ಮೊದಲಾದ ಸಿಹಿ ಪದಾರ್ಥಗಳನ್ನು ದೇವರಿಗೆ ಎಡೆಹಾಕಿ ಊಟ ಮಾಡುತ್ತಾರೆ. ಮಾದಿಗ ಮತ್ತು ಹೊಲೆಯರು ಮಾತ್ರ ಕುರಿ, ಕೋಣ, ಮೇಕೆಗಳನ್ನು ಮಾತ್ರ ಕಡಿಯುತ್ತಾರೆ. ಕೋಳಿಯನ್ನು ಕಡಿಯುವುದಿಲ್ಲ. ಮತ್ತು ಅದನ್ನು ಕೊಯ್ದು ತಿನ್ನುತ್ತಾರೆ.

ಮಧ್ಯಾಹ್ನದ ಮಾರಮ್ಮನೆಂದು ಹೆಸರಾದ ಈ ಜಾತ್ರೆ ಕೆಲವೇ ಗಂಟೆಗಳಲ್ಲಿ ನಡೆದು ಸಂಜೆಯಾಗುವುದರೊಳಗಾಗಿ ಪ್ರತಿಯೊಬ್ಬರು ತುಮ್ಮುನಲ್ಲಿ ಇರದಂತೆ ಗಡಿ ಬಿಡಿಯಾಗಿ ಜಾಗ ಖಾಲಿ ಮಾಡಿ ಅವರವರ ಊರುಗಳಿಗೆ ಹೋಗುತ್ತಾರೆ. ಆಕಸ್ಮಿಕವಾಗಿ ತುಮ್ಮುನಲ್ಲಿ ಯಾರಾದರೂ ಉಳಿದು ಕೊಂಡರೆ ಆದಿನ ರಾತ್ರಿ ಈ ಪ್ರದೇಶದಲ್ಲಿ ಮಾರೆಮ್ಮ ಓಡಾಡುತ್ತಾಳೆ. ಕುರಿ, ಕೋಳಿ, ಕೋಣ ಕಡಿದು ಚೆಲ್ಲಿದ ರಕ್ತ ಕುಡಿಯಲು ನವದುರ್ಗಿಯರು ಬರುತಾರೆ. ಆಗ ಯಾರು ನೋಡಬಾರದು. ಆಕಸ್ಮಿಕವಾಗಿ ನೋಡಿದ್ದಾದರೆ ಎದೆ ಒಡೆದುಕೊಂಡು ಸಾಯುತ್ತಾರೆಂದು ಇಲ್ಲಿಯ ಜನರ ನಂಬಿಕೆಯಾಗಿದೆ. ಬಳಮಲಾರ ಹೊತ್ತು ಜೀವಿಸುತ್ತಿದ್ದ ಬಳೆಗಾರನೊಬ್ಬ ಮಾರಮ್ಮನ ಜಾತ್ರೆ ನಡೆದಾಗ ಆದಿನ ರಾತ್ರಿ ಮರಹತ್ತಿ ಕುಳಿತು, ತುಮ್ಮುವಿನಲ್ಲಿ ಉಳಿದುಕೊಂಡನಂತೆ. ಮಧ್ಯರಾತ್ರಿ ಸಮಯದಲ್ಲಿ ಆರ್ಭಟಿಸುತ್ತ ಬಂದ ಮಾರಿಯ ರೌದ್ರಾವತಾರ ನೋಡಿ ರಕ್ತ ಕಾರಿ ಮರದಿಂದ ಕೆಳಗೆ ಬಿದ್ದು ಸತ್ತನೆಂದು ಆತನ ಸಮಾಧಿ ಕಟ್ಟೆ ಮತ್ತು ಮರವನ್ನು ಈಗಲೂ ತೋರಿಸುತ್ತಾರೆ. ಅದಕ್ಕಾಗಿ ಈ ದೇವರು ತುಮ್ಮುಗೆ ಹೋಗುವಾಗ ಬಳೆಗಾರನ ಕಟ್ಟೆ ಹತ್ತಿರ ಗದ್ದಿಗೆ ಮಾಡಿ ನಂತರ ಹೊರಡುವ ಪದ್ಧತಿ ಇದೆ.

ಈ ಕಥೆ ಮತ್ತು ಘಟನೆಯಿಂದ ಜಾತ್ರೆ ನಡೆದ ಸ್ಥಳದಲ್ಲಿ ಯಾರೂ ಇಲ್ಲದೇ ಸಂಜೆಯಾಗುವುದರೊಳಗಾಗಿ ದೇವರನ್ನು ಹೊರಡಿಸಿಕೊಂಡು ಗಾರಸಮುದ್ರ ಸೇರಿ ದೇವರನ್ನು ಗುಡಿದುಂಬಿಸುತ್ತಾರೆ. ಮಾರಮ್ಮನ ಗುಡಿ ಪಕ್ಕ ಬೊಮ್ಮಲಿಂಗ ದೇವರ ಗುಡಿಯಿದ್ದು ಈ ದೇವರು ಮಾರಕ್ಕನ ತಮ್ಮ ಎಂದು ಹೇಳುತ್ತಾರೆ. ಗಾರಸಮುದ್ರದ ಮಾರಮ್ಮನ ಹಬ್ಬ ಮಂಗಳವಾರವಾದರೆ ಅದರ ಹಿಂದಿನ ಗುರುವಾರ ಬೊಮ್ಮಲಿಂಗ ದೇವರ ಗುಡಿ ಹತ್ತಿರ ವಾಸೆ ಕೊಯ್ಯುತ್ತಾರೆ. ಮರುದಿನ ಅಂದರೆ ಬುಧವಾರ ಮಾರಮ್ಮನ ಗುಡಿ ಮುಂದೆ ಸಿಡಿ, ಓಕುಳಿ, ಉತ್ಸವಗಳು ಊರಲ್ಲಿ ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಗೌರಸಮುದ್ರದ ಗ್ರಾಮದವರ ವಿಶೇಷತೆಯೆಂದರೆ ಜಾತ್ರೆಯ ದಿನ ಯಾರೊಬ್ಬರೂ ಬೇಟೆ ಕಡಿಯುವುದಿಲ್ಲ. ಮತ್ತು ಮಾಂಸಹಾರವನ್ನು ಅಡಿಗೆ ಮಾಡುವುದಿಲ್ಲ. ಹೊರಗಿನಿಂದ ಜಾತ್ರೆಗೆ ಬಂದ ಭಕ್ತಾದಿಗಳು ತುಮ್ಮುವಿನಲ್ಲಿ ಮಾಂಸಹಾರ ಮಾಡುತ್ತಾರೆ. ಆದರೆ ತಿಂಗಳು ಕಳೆದ ನಂತರ ಮರಿ ಪರಿಷೆಯಲ್ಲಿ ಅಂದರೆ ತಿಂಗಳು ಪರಿಷೆಯಲ್ಲಿ ಮಾತ್ರ ಈ ಊರಿನ ಮಾಂಸಹಾರಿಗಳು ಬೇಟೆ ಕಡಿಯುತ್ತಾರೆ. ಸಸ್ಯಹಾರಿಗಳು ಹುಗ್ಗಿ, ಹೋಳಿಗೆ, ಅನ್ನ ಮುಂತಾದ ಪದಾರ್ಥಗಳನ್ನು ತಯಾರಿಸುತ್ತಾರೆ. ಭಾದ್ರಪದ ಮಾಸದ ಮೊದಲನೆಯ ಮಂಗಳವಾರ ಗೌರಸಮುದ್ರದಲ್ಲಿ ಮಾರೆಮ್ಮನ ಜಾತ್ರೆ ಮುಗಿದ ನಂತರ ಉಳಿದೆಲ್ಲ ಕಡೆಯೂ ಅವರವರ ಅನುಕೂಲಕ್ಕೆ ತಕ್ಕಂತೆ ಬಂದು ಮಂಗಳವಾರ ಮಾರಮ್ಮನ ಹಬ್ಬ ಮಾಡುತ್ತಾರೆ ಎಂದು ತಿಳಿದು ಬರುತ್ತದೆ.

ಗೌರಸಮುದ್ರದ ಮಾರಮ್ಮನಿಗೆ ಮಾದಿಗರು, ಹೊಲೆಯರು, ಭೋವಿಗಳು, ಉಪ್ಪಾರರು, ಕುರುಬರು, ಕುಂಚಿಟಗರು, ಚಲುವಾದಿ ಮಾಂಗರು, ದಲಿತರು, ಇತ್ಯಾದಿ ಅತಿ ಹೆಚ್ಚು ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

ಬಹುಪಾಲು ಸಮುದಾಯಗಳು ಜನಾಂಗಗಳಿಗೆ ಅಮ್ಮನಾಗಿ ಈ ಪ್ರದೇಶದಲ್ಲಿ ಹೆಸರಾಗಿದ್ದಾಳೆ. ಗೌರಸಮುದ್ರದ ಮಾರೆಮ್ಮ. ಹೀಗೆ ಹಿರೇ ಗೌಸಂದ್ರ ಮಾರೆಮ್ಮನ ಜಾತ್ರೆಯಲ್ಲಿ ಹಲವಾರು ಸಮುದಾಯದವರು ಜನಾಂಗಗಳು ಹೆಚ್ಚಿನ ಸಂಖ್ಯೆಯಲ್ಲಿ ಬಂದು ಅಲ್ಲಿ ಸೇರಿ ಮಾರಮ್ಮನ ದೈವ ದರ್ಶನವನ್ನು ಪಡೆದುಕೊಂಡು ಮತ್ತೆ ತಮ್ಮ ತಮ್ಮ ಊರುಗಳಿಗೆ ಹಿಂದಿರುಗುತ್ತಾರೆ.

**ಅಡಿ ಟಿಪ್ಪಣಿ**

*ಈ ಅಧ್ಯಾಯದಲ್ಲಿ ಬರುವ ಮಾದಿಗ ಪದ ನಿಷ್ಪತ್ತಿ ಮತ್ತು ಮಾದಿಗ ಸಮುದಾಯದ ಕುರಿತಂತೆ ಇರುವ ಪುರಾಣ ಮೂಲದ ಕಥೆಗಳನ್ನು ಅರ್ಜುನ ಗೊಳಸಂಗಿ ಅವರ ದಲಿತರ ಬದುಕು ಮತ್ತು ಸಂಸ್ಕೃತಿ ಪುಸ್ತಕದಿಂದ ಪಡೆಯಲಾಗಿದೆ.

ಪ್ರಸ್ತುತ ನಿಬಂಧದ ಅಧ್ಯಯನ ವಿಷಯವಾದ 'ಮಾದಿಗ ಸಮುದಾಯದ ಆಚರಣೆಗಳು' ಎಂಬ ವಿಷಯದ ಅಧ್ಯಯನದ ವ್ಯಾಪ್ತಿಯು ಕರ್ನಾಟಕ ರಾಜ್ಯದ ಚಿತ್ರದುರ್ಗ ಜಿಲ್ಲೆಯ ಬೆಟ್ಟಗುಡ್ಡಗಳಿಂದ ಆವೃತಗೊಂಡು ಮಳೆಯನ್ನೇ ನಂಬಿ ಜೀವನ ನಡೆಸುವಂತಹ ಮೊಳಕಾಲ್ಮೂರು ತಾಲ್ಲೂಕಿನ ಪರಿಸರವಾಗಿದೆ. ಈ ತಾಲ್ಲೂಕಿನಲ್ಲಿ ಹಲವಾರು ಬುಡಕಟ್ಟು ಸಮುದಾಯಗಳಿದ್ದು, ಅದರಲ್ಲಿ ಮಾದಿಗ ಸಮುದಾಯವು ಒಂದು. ಈ ಸಮುದಾಯವು ಎಲ್ಲಾ ಸಮುದಾಯವರಿಗಿಂತ ಕೆಳ ಮಟ್ಟದಲ್ಲಿದ್ದು, ಅವರ ಆಚರಣೆ, ನಂಬಿಕೆ, ಇತ್ಯಾದಿ ಅಂಶಗಳಲ್ಲಿ ಹಲವಾರು ಬದಲಾವಣೆಗಳನ್ನು ಕಾಣಬಹುದಾಗಿದೆ. ವೇದ, ಉಪನಿಷತ್ತುಗಳ ಕಾಲದಿಂದಲೂ ಈ ಸಮುದಾಯದ ಅಸ್ತಿತ್ವವನ್ನು ಗುರುತಿಸಬಹುದಾಗಿದೆ. ನಂತರ ವರ್ಣಗಳ ವಿಂಗಡಣೆಯನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚತುವರ್ಣಗಳನ್ನು ವೇದ ಉಪನಿಷ್‌ಗಳಲ್ಲಿ ವ್ಯಕ್ತಗೊಂಡಿರುವುದು ಕಂಡು ಬರುತ್ತದೆ. ಆದುದರಿಂದ ಈ ಸಮುದಾಯವು ಆಯಾ ಕಾಲದಿಂದಲೂ ತಮ್ಮ ಜೊತೆಗೆ ಆಚರಣೆ, ನಂಬಿಕೆ ಸಂಪ್ರದಾಯ ಈ ತರಹದ ಆಚರಣೆಗಳನ್ನು ಪರಂಪರೆಯಾಗಿ, ಬಳುವಳಿಯಾಗಿ ಬೆಳೆದು ಬಂದರೂ ಸಹ ಇತ್ತೀಚಿನ ಆಧುನೀಕರಣದಿಂದ ಹಲವಾರು ಬದಲಾವಣೆಗಳನ್ನು ಗುರುತಿಸಬಹುದು.

ಮಾದಿಗರು ತಮ್ಮ ಬದುಕಿನೊಂದಿಗೆ ಚಾಚೂ ತಪ್ಪದೇ ಆಚರಿಸುತ್ತಾ ಬಂದಿರುವ ಮತ್ತು ನಂಬಿಕೊಂಡು ಬಂದಿರುವ ಆಚರಣಾತ್ಮಕ ವಿವರಗಳನ್ನು ವರ್ಗೀಕರಿಸಿ ಅವರ ಒಟ್ಟಂದದ ಸಾಂಸ್ಕೃತಿಕ ಆಶಯಗಳನ್ನು ಗುರುತಿಸುವ ಕಿರು ಪ್ರಯತ್ನವನ್ನು ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಅಂದಂದಿನ ದುಡಿಮೆಯಿಂದಲೇ ಹೊಟ್ಟೆಹೊರೆಯುವ ಇವರು ನಾಳೆ ಎಂತೋ ಎಂದು ಭವಿಷ್ಯದ ಕುರಿತು ಯೋಚಿಸಲಾರದ, ಯೋಜನೆಗಳನ್ನು ರೂಪಿಸಿಕೊಳ್ಳಲಾರದ ಇವರು ಇತ್ತ ಅದ್ದೂರಿಯಿಂದ ಆಚರಿಸಲೂ ಆಗದೆ, ಅತ್ತ ಸಂಪೂರ್ಣವಾಗಿ ಬಿಟ್ಟು ಬಿಡಲೂ ಆಗದೆ ಆಚರಿಸುತ್ತಾ ಬಂದಿರುವ ಹಬ್ಬ ಹರಿದಿನಗಳನ್ನು ಉಲ್ಲೇಖಿಸಿ ವಿವರಿಸಲಾಗಿದೆ. ಇದರೊಂದಿಗೆ ಸಂಪ್ರದಾಯಗಳನ್ನು ವಿಶ್ಲೇಷಿಸಲಾಗಿದೆ. ಅವರ ರೂಢಿ, ನಂಬಿಕೆಗಳು, ವಿಧಿ ನಿಷೇಧಗಳನ್ನು ಅರ್ಥೈಸಲು ಪ್ರಯತ್ನಿಸಲಾಗಿದೆ. ಜಾನಪದ ಸಂಪ್ರದಾಯದ ಒಂದು ಜನ ಸಮುದಾಯದ ಸಮಷ್ಠಿ ಸೃಷ್ಟಿ ಸಾಮಾಜಿಕ ಜೀವನದ ಸಂಕೇತ. ದೇಶದ ಸಂಸ್ಕೃತಿಯ ತಾಯಿ ಬೇರು. ಅದು ಜನ ಸಾಮಾನ್ಯರ ಕೃತಿಯೂ ಹೌದು, ಸ್ಮೃತಿಯೂ ಹೌದು. ಅದು ವಂಶಪಾರಂಪರಿಕವಾಗಿ ಪೀಳಿಗೆಯಿಂದ ಪೀಳಿಗೆಗೆ ಹರಿದು ಬಂದುದು. ಹೀಗೆ ಹರಿದು ಬರುತ್ತಿರುವ ಅಲ್ಪಸ್ವಲ್ಪ ಕಣ್ಮರೆಯಾಗುತ್ತಿರುವ ನಂಬಿಕೆ, ಆಚರಣೆ ರೂಢಿ-ಸಂಪ್ರದಾಯಕ್ಕೆ ಸಂಬಂದಿಸಿದ ಅನೇಕ ಅಂಶಗಳನ್ನು ಇಲ್ಲಿ ಸೆರೆ ಹಿಡಿದು ಪರಿಚಯಿಸಲಾಗಿದೆ.

ಮಾದಿಗ ಸಮುದಾಯದಲ್ಲಿ ಕೆಲವು ಆಚರಣೆಗಳನ್ನು ಮಾಡುತ್ತಾರೆ. ಅಂದರೆ ಯಾವುದೇ ಒಂದು ಜಾತ್ರೆ ಅಥವಾ ಋತುಮತಿ ಶಾಸ್ತ್ರವನ್ನು ತೆಗೆದುಕೊಂಡಾಗ ಅಲ್ಲಿ ಬರುವಂತಹ ಆಚರಣೆಗಳು ಮುಖ್ಯವಾಗಿರುತ್ತವೆ. ಈ ಮಾದಿಗ ಸಮುದಾಯದಲ್ಲಿ ಋತುಮತಿಯಾದವಳನ್ನು ಕೂಡಿಸಿ ಅವಳ ಪಕ್ಕದಲ್ಲಿ ಹೆಣ್ಣುಮಗಳಿಗೆ ಪ್ಯಾಂಟು ಮತ್ತು ಷರಟನ್ನು ಹಾಕಿಸಿ ಅವಳ ಪಕ್ಕದಲ್ಲಿ ಕೂರಿಸುತ್ತಾರೆ. ಇದು ಇವರ ಒಂದು ಆಚರಣೆಯಾಗಿದೆ. ನಂತರ ಹಾಡುಗಳನ್ನು ಹಾಡುವುದು ಇವರ ಸಂಪ್ರದಾಯ. ಮದುವೆಯ ಸಂದರ್ಭದಲ್ಲಿಯೂ ಸಹ ಅನೇಕ ಸಂಪ್ರದಾಯಗಳನ್ನು ಮಾಡುತ್ತಾರೆ. ಅರಿವೇಣಿಗಳನ್ನು ತರುವುದು, ಗಂಗೆ ಪೂಜೆ, ತಾಳಿಶಾಸ್ತ್ರ, ಮನೆದುಂಬಿಸುವುದು, ನಿಶ್ಚಿತಾರ್ಥ ಮುಂತಾದ ಸಂಪ್ರದಾಯಗಳನ್ನು ಈ ಸಮುದಾಯದಲ್ಲಿ ಕಾಣಬಹುದು. ನಂತರ ಸಾವಿನ ಸಂದರ್ಭದಲ್ಲಿ ಮೂರು ದಿನದ ಕಾರ್ಯವನ್ನು ಮಾಡುತ್ತಾರೆ. ಇಲ್ಲಿ ಬೀಗರಿಗೆ ಬೇರೆ ಅಣ್ಣತಮ್ಮಂದಿರಗೆ ಬೇರೆ ಅಡಿಗೆಯನ್ನು ಮಾಡಿ ಉಣಬಡಿಸುತ್ತಿದ್ದರು. ಇದರಿಂದ ಅವರಿಗೆ ಸಂತೋಷವಾಗುತ್ತಿತ್ತು. ನಂತರ ಸತ್ತ ಶವವನ್ನು ಕೆಲವೊಂದು

ಜನಾಂಗದಲ್ಲಿ ಕೂಡಿಸಿಕೊಂಡು ಹೋಗುತ್ತಾರೆ. ಆದರೆ ಈ ಸಮುದಾಯದಲ್ಲಿ ಮಲಗಿಸಿಕೊಂಡು ಹೋಗುತ್ತಾರೆ. ಇದು ಒಂದು ಸಂಪ್ರದಾಯವೆಂದು ಹೇಳಬಹುದು.

ಮಾದಿಗರು ತಮ್ಮ ಬದುಕಿನಲ್ಲಿ ಬದಲಾವಣೆಯನ್ನು ಕಂಡುಕೊಂಡಿದ್ದಾರೆ. ತಮ್ಮ ಮೂಲವೃತ್ತಿಯ ಜೊತೆಗೆ ಶಿಕ್ಷಣ, ಉದ್ಯೋಗ, ಇತರೆ ವೃತ್ತಿಗಳನ್ನು ಕೈಗೊಂಡು ಜೀವನ ನಡೆಸುತ್ತಿದ್ದಾರೆ. ಇವರಲ್ಲಿ ಶೈಕ್ಷಣಿಕ ಪ್ರಗತಿಯಾದಂತೆಲ್ಲಾ ತಮ್ಮ ಹಳೆಯ ಆಚರಣೆ ಮತ್ತು ಜೀವನವಿಧಾನಗಳನ್ನು ಪರಿವರ್ತಿಸಿಕೊಳ್ಳತೊಡಗಿದ್ದಾರೆ. ತಮ್ಮ ಉಡುಪು ವಸತಿ ವ್ಯವಸ್ಥೆ, ಆಹಾರ ಪದ್ಧತಿಯಲ್ಲಿ ಬದಲಾವಣೆಯನ್ನು ಕಂಡುಕೊಂಡಿದ್ದಾರೆ. ಅಂದರೆ ಇವರ ಒಂದು ವಿಶಿಷ್ಟ ಅಂಶಗಳು ಕ್ರಮೇಣ ಕರಗುತ್ತಾ ಬರುತ್ತಿರುದರಿಂದ ಅವರನ್ನು ಅವರ ಸುತ್ತಮುತ್ತಲಿನ ಜನಸಮುದಾಯದಿಂದ ಬೇರೆಯಾಗಿ ಗುರುತಿಸುವುದು ಅಸಾಧ್ಯವಾಗಿದೆ.

ಮಾದಿಗ ಸಮುದಾಯದ ಬಗ್ಗೆ ಕ್ಷೇತ್ರಕಾರ್ಯ ಕೈಗೊಂಡು ಜನಾಂಗದ ಹಿನ್ನೆಲೆ, ಭೌಗೋಳಿಕ ಪರಿಸರ, ಮೂಲ ಪರಂಪರೆ, ನೆಲೆಗಳು, ಕೌಟುಂಬಿಕ ವ್ಯವಸ್ಥೆ, ಧಾರ್ಮಿಕ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ಸಂಸ್ಕೃತಿಯ ಬದುಕನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ. ನಂತರ ಇವನ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಉಡುಗೆ-ತೊಡುಗೆ, ವಸತಿ, ಆಹಾರ ಪದ್ಧತಿ, ನ್ಯಾಯ ಪದ್ಧತಿ, ವಿಧಿ-ನಿಷೇಧಗಳ ಕುರಿತು ವಿವರವಾಗಿ ಚರ್ಚಿಸಲಾಗಿದೆ. ಸಂಸ್ಕಾರಗಳು ಮತ್ತು ಸಂಪ್ರದಾಯಗಳಿಗೆ ಸಂಬಂಧಿಸಿದಂತೆ ಜನನ, ಹೆರಿಗೆ, ಋತುಮತಿ ಶಾಸ್ತ್ರ, ವಿವಾಹ ಪದ್ಧತಿ, ನಾಮಕರಣ, ನಿಶ್ಚಿತಾರ್ಥ, ಶವ ಸಂಸ್ಕಾರ ಮೊದಲಾದ ಕಟ್ಟು-ಕಟ್ಟಳೆಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ.

ನಂತರ ಆಚರಣೆಗಳಲ್ಲಿ ಹಬ್ಬಗಳು, ಜಾತ್ರೆಗಳು, ದಾಸಯ್ಯಗಳು, ಪೂಜಾ ಪದ್ಧತಿಗಳು, ದೇವರ ಬಗ್ಗೆ ನಂಬಿಕೆ, ಆರಾಧನೆ, ಧಾರ್ಮಿಕ ಕೇಂದ್ರಗಳು, ಹರಕೆ, ಮಣ್ಣೆತ್ತಿನ ಅಮವಾಸ್ಯೆ, ದುರುಗಮ್ಮನ ಜಾತ್ರೆ, ನಂತರ ದೇವರ ಪಾಳೆ, ಗಂಗೆ ಪೂಜೆ ಮಾಡುವ ವಿಧಾನ ಮತ್ತು ಪ್ರದೇಶಗಳು, ದೇವರೆತ್ತುಗಳು, ಬಸವ, ಮಣೇವು ಕುಣಿತ, ದಾಸಯ್ಯಗಳ ಸಾಮಾಜಿಕ ನಿಯಮಗಳನ್ನು ಕೂಲಂಕಷವಾಗಿ ವಿವರಿಸಲಾಗಿದೆ.

ನಂತರ ಮಾದಿಗರು ಆರ್ಥಿಕವಾಗಿ ತುಂಬಾ ದುಸ್ಥಿತಿಯಲ್ಲಿರುವ ಕಾರಣ ಈ ಜನಗಳು ಊರಿನ ದಣಿಗಳಿಗೆ ಆಳುಗಳಾಗಿ ಎಲ್ಲಾ ಸವರ್ಣೀಯ ಜನಗಳಿಗೆ ತಲೆಬಾಗಿ ಜೀವನ ಸಾಗಿಸುವ ಪರಿಸ್ಥಿತಿ ಇದೆ. ಊರು ಬಾವಿಯ ನೀರು ಮುಟ್ಟುವಂತಿಲ್ಲ, ಊರ ದೇವರ ಗುಡಿ ಪ್ರವೇಶಿಸುವಂತಿಲ್ಲ. ಹೋಟೆಲ್‌ಗಳಲ್ಲಿಯಂತೂ ಬಾಗಿಲ ಹೊರಗೆ ಕುಳಿತು ತಮ್ಮ ಅಗತ್ಯಗಳನ್ನು ಪೂರೈಸಿಕೊಳ್ಳಬೇಕು. ಊರಿನ ಎಲ್ಲಾ ಸವರ್ಣೀಯರ ಬಟ್ಟೆ ತೊಳೆಯುವ ಮಡಿವಾಳರು ಮಾದಿಗರ ಬಟ್ಟೆಗಳನ್ನು ಮುಟ್ಟುವುದಿಲ್ಲ. ಈ ವ್ಯವಸ್ಥೆಯನ್ನು ಇಂದಿಗೂ ಹಳ್ಳಿ ಹಳ್ಳಿಗಳಲ್ಲಿಯೂ ಕಾಣಬಹುದು. ಮೊಳಕಾಲ್ಮೂರು ಪರಿಸರದ ಮಾದಿಗ ಸಮುದಾಯದಲ್ಲಿ ಆಚರಿಸುವಂತಹ ಆಚರಣೆಗಳು, ಹಬ್ಬ ಹರಿದಿನಗಳು, ಆರ್ಥಿಕ ಪರಿಸ್ಥಿತಿಗಳನ್ನು ತಮ್ಮ ಜೀವನದಲ್ಲಿ ರೂಪಿಸಿಕೊಂಡಿರುವುದರ ಬಗ್ಗೆ ಅಧ್ಯಯನ ಮಾಡಲಾಗಿದೆ. ಇಲ್ಲಿ ಮೊಳಕಾಲ್ಮೂರು ತಾಲ್ಲೂಕು ಹೆಚ್ಚಿನ ಹಳ್ಳಿಗಳನ್ನು ಒಳಗೊಂಡಿದ್ದು ತುಂಬಾ ವಿಸ್ತಾರವಾದ ತಾಲ್ಲೂಕಾಗಿದೆ. ಈ ತಾಲ್ಲೂಕಿಗೆ ಸೇರಿದ ಹಲವಾರು ಹಳ್ಳಿಗಳು ನೀರಾವರಿ ಪ್ರದೇಶಗಳಲ್ಲ. ಅಲ್ಲಿರುವಂತಹ ರೈತರು ಮಳೆರಾಯನನ್ನೇ ನಂಬಿಕೊಂಡು ಕೃಷಿಯನ್ನು ಮಾಡುತ್ತಾರೆ. ನಂತರ ಗ್ರಾಮೀಣ ಪ್ರದೇಶದಲ್ಲಿ ವಿಶೇಷವಾಗಿ ಮಾದಿಗರು ಚರ್ಮಗಾರಿಕೆ ಮಾಡುವುದು ಮತ್ತು ಹಗ್ಗ ತಯಾರಿಸುವುದು ಮುಂತಾದ ಉಪಕಸುಬಗಳನ್ನು ಹೊಂದಿದ್ದರು. ಆಧುನಿಕ ಸಂದರ್ಭದಲ್ಲಿ ಶಿಕ್ಷಣ ಪದ್ಧತಿಯು ಅವರಿಗೆ ಸ್ವಲ್ಪ ಮಟ್ಟಿನ ಸಹಾಯ ಮಾಡಿತು ಎನ್ನಬಹುದು. ಏಕೆಂದರೆ ಹಿಂದೆ ಇದ್ದಂತಹ ಜಾತಿ-ಪದ್ಧತಿಗಳನ್ನು ಅಥವಾ ಹಿಂದೆ ಆಚರಿಸುವಂತಹ ಆಚರಣೆಗಳು ಪ್ರಸ್ತುತ ಸಂದರ್ಭದಲ್ಲಿ ನಶಿಸತೊಡಗಿವೆ. ವಸಾಹತು ಸಂದರ್ಭದಲ್ಲಿ ಬ್ರಿಟಿಷರು ಪ್ರಾರಂಭ ಮಾಡಿದಂತಹ ಶೈಕ್ಷಣಿಕ ಕಾರ್ಯವು ಭಾರತೀಯ ತಳಸಮುದಾಯಗಳಲ್ಲಿ ಹೊಸತೊಂದು ಜಾಗೃತಿಗೆ ಕಾರಣವಾಯಿತು. ಅದು ಸ್ವಾತಂತ್ರ್ಯಾನಂತರದ ಕಾಲಘಟ್ಟದಲ್ಲಿ ಇನ್ನಷ್ಟು ವಿಸ್ತರಿಸಿ ಕೆಳವರ್ಗಗಳಲ್ಲಿ ಅದರಲ್ಲೂ ಅಸ್ಪೃಶ್ಯ ಸಮುದಾಯಗಳಲ್ಲಿ ನಂಬಿಕೆ ಮತ್ತು ಜೀವನ ವಿಧಾನಗಳಲ್ಲಿ ಮಹತ್ತರ ಬದಲವಾಣೆಗೆ ಕಾರಣವಾಯಿತು. ಅಷ್ಟಲ್ಲದೆ ಕೆಲವು ದಲಿತ ಸಂಘಟನೆಗಳು, ಅಂಬೇಡ್ಕರ್ ಸಂಘಗಳು ಇಂತಹ ಸಮುದಾಯಗಳ ಪರಿವರ್ತನೆಗೆ ಪೂರಕವಾಗಿವೆ.

ಮಾದಿಗರು ಮಾತೃದೇವತೆಯ ಆರಾಧಕರಾಗಿದ್ದರು. ಹೀಗಾಗಿ ಅವರಲ್ಲಿ ಇನ್ನೂ ಈ ಸಂಸ್ಕೃತಿಯ ಕುರುಹುಗಳು ಜೀವಂತವಾಗಿ ಉಳಿದಿವೆ. ಭಾಷೆ, ಕಲೆ, ಸಾಹಿತ್ಯಗಳಲ್ಲಿ ಇವರು ತೋರಿರುವ ಸೃಷ್ಟ್ಯಾತ್ಮಕವಾದ ಪ್ರತಿಭೆ

ಅಪೂರ್ವವಾದುದು. ಬಯಲಾಟ, ಭಜನೆ, ಕೋಲಾಟ, ಡೊಳ್ಳು ಕುಣಿತಗಳಂತಹ ಕಲೆಗಳಲ್ಲಿ ತಮ್ಮ ಅದ್ಭುತ ಪ್ರತಿಭೆಯನ್ನು ಸಾಧಿಸಿದ್ದಾರೆ. ವಿಶೇಷವಾಗಿ ಹೆಣ್ಣುಮಕ್ಕಳಲ್ಲಿ ಹಲವಾರು ಕಥನಗೀತೆಗಳು, ದೇವರ ಹಾಡುಗಳು, ಸಂಪ್ರದಾಯದ ಹಾಡುಗಳು ಇನ್ನು ಉಳಿದುಕೊಂಡು ಬಂದಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಕೊನೆಯಲ್ಲಿ ಮಾದಿಗ ಸಮುದಾಯದ ಆಚರಣೆಗಳು ಎಂಬ ಅಧ್ಯಾಯವಿದ್ದು ಇದರಲ್ಲಿ ಈ ಸಮುದಾಯದ ಪಾರಂಪರಿಕ ಬದುಕು ಮತ್ತು ಉಂಟಾದ ಸುಧಾರಣೆಗಳು ಹಾಗೂ ತಲೆದೋರಿದ ಬಿಕ್ಕಟ್ಟುಗಳನ್ನು ಚರ್ಚಿಲಾಗಿದೆ.

ಒಟ್ಟಾರೆ ಇಲ್ಲಿ ಸಂಶೋಧನೆಯಲ್ಲಿ ಮೊಳಕಾಲ್ಮೂರು ತಾಲ್ಲೂಕನ್ನು ಕೇಂದ್ರವಾಗಿರಿಸಿಕೊಂಡು ಮಾದಿಗರ ಬದುಕನ್ನು ಮತ್ತು ಅವರ ಆಚರಣೆಗಳನ್ನು ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ. ತಮ್ಮ ಮೇಲೆ ವಿಧಿಸಲ್ಪಟ್ಟ ಎಲ್ಲಾ ಕಟ್ಟು ಪಾಡುಗಳನ್ನು ಎದುರಿಸಿಯೂ ಬದುಕಿನ ಬಗೆಗೆ ಅದಮ್ಯ ಪ್ರೀತಿ, ಬತ್ತದ ಉತ್ಸಾಹವನ್ನು ಉಳಿಸಿಕೊಂಡು ಬಂದಿರುವ ಸಮುದಾಯದ ಸಾಂಸ್ಕೃತಿಕ ಆಂತರ್ಯ ಮತ್ತು ಅದರ ಆಶಯಗಳನ್ನು ಅವರ ಆಚರಣಾತ್ಮಕ ನೆಲೆಯಲ್ಲಿ ವಿಶ್ಲೇಷಿಸಿ ಅದರ ಫಲಿತಗಳನ್ನು ಕಂಡುಕೊಳ್ಳುವ ಒಂದು ಕಿರು ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಇಂತಹುದೇ ಪರಿಸ್ಥಿತಿ, ಸಾಮಾಜಿಕ ಸಂದರ್ಭ, ಸಾಂಸ್ಕೃತಿಕ ಆಯಾಮಗಳಿರುವ ಇತರೇ ತಳಸಮುದಾಯಗಳ ಕುರಿತಂತೆ ಭಿನ್ನ ಅಧ್ಯಯನಕ್ಕೆ, ಹೊಸ ಅರ್ಥೈಕೆಗೆ, ವ್ಯಾಖ್ಯಾನಗಳಿಗೆ ಪ್ರಸ್ತುತ ಅಧ್ಯಯನವು ಪ್ರೇರಣೆ ನೀಡಬಹುದೆಂದು ನಂಬಲಾಗಿದೆ.

# ಗ್ರಂಥ ಋಣ

೧. ಅಗ್ರಹಾರ ಕೃಷ್ಣಮೂರ್ತಿ, **ಸಂಸ್ಕೃತಿ ಕಥನ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

೨. ಅಂಬಳಿಕೆ ಹಿರಿಯಣ್ಣ, **ಜಾನಪದ ಪರಿಶೋಧನೆ**, ಪ್ರಜ್ವಲ ಪ್ರಕಾಶನ, ಮೈಸೂರು, ೧೯೮೮

೩. ಕೋಟಗಾನಹಳ್ಳಿ ರಾಮಯ್ಯ, **ಸಿಂಧ್ ಮಾದಿಗರ ಸಂಸ್ಕೃತಿ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೭

೪. ಕಾಳೇಗೌಡ ನಾಗವಾರ, **ಗಿರಿಜನ ಸಂಸ್ಕೃತಿ**, ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು, ೨೦೦೦

೫. ಕ್ಯಾತನಹಳ್ಳಿ ರಾಮಣ್ಣ, **ಕ್ಷೇತ್ರಕಾರ್ಯದ ಹಾದಿಯಲ್ಲಿ**, ಅಚ್ಚಿ ಹೊತ್ತಿಗೆ ಪ್ರಕಾಶನ, ಕ್ಯಾತನಹಳ್ಳಿ, ೧೯೯೭

೬. ಗಂಗಾಧರ ದೈವಜ್ಞ, **ಬುಡಕಟ್ಟು ಸಮಾಜ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೭. ಚಂದ್ರಶೇಖರ ಕಂಬಾರ, **ದೇಸೀ ಚಿಂತನೆ**, ಅಂಕಿತ ಪುಸ್ತಕ ಪ್ರಕಾಶಕರು, ಬೆಂಗಳೂರು, ೨೦೦೨

೮. ಚಿನ್ನ ಸ್ವಾಮಿ ಸೋಸಲೆ, **ನಮ್ಮ ಗ್ರಾಮಗಳು, ಅಂದು ಇಂದು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೯. ದಾಸೇಗೌಡ, **ನಮ್ಮ ಜಾನಪದ ನಂಬಿಕೆಗಳು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೩

೧೦. ಪೆರ್ಲಾ ಮಾ. ಭ., **ಭಾರತೀಯ ವಿವಾಹ ಸಂಸ್ಕಾರ**, ಕನ್ನಡ ಪ್ರಪಂಚ ಪ್ರಕಾಶಕರು, ಪುತ್ತೂರು, ೨೦೦೦

೧೧. ಬೋರಲಿಂಗಯ್ಯ ಹಿ. ಚಿ., **ಗಿರಿಜನ ನಾಡಿಗೆ ಪಯಣ**, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ೧೯೯೧

೧೨. ಬಸವರಾಜ ನೆಲ್ಲಿಸರ, **ಜಾನಪದ ಮತ್ತು ಪೂರಕ ಕ್ಷೇತ್ರಗಳು**, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ೨೦೦೨

೧೩. ಬರಗೂರು ರಾಮಚಂದ್ರಪ್ಪ, **ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ**, ಕ.ಸಾ.ಅ., ಬೆಂಗಳೂರು, ೧೯೯೩

೧೪. ಮೊಗಳ್ಳಿ ಗಣೇಶ್, **ದಲಿತರು ಮತ್ತು ಜಾಗತೀಕರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೧೯೯೯

೧೫. ಮುಳಗುಂದ ಚಾ. ವಿ., **ಮಾತೋಶ್ರೀ**, ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ, ೧೯೮೬

೧೬. ಮಹದೇವಯ್ಯ ಪಿ., **ದಲಿತರು ಮತ್ತು ಪರ್ಯಾಯ ರಾಜಕಾರಣ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೫

೧೭. ಮಂಜುನಾಥ ಬೇವಿನಕಟ್ಟಿ, **ಜನಪದ ನಂಬಿಕೆಗಳು**, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೬

೧೮. ರಮೇಶ್ ಸ. ಚಿ., **ಅಲೆಮಾರಿಗಳ ಸ್ಥಿತಿಗತಿ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೫

೧೯. ರಂಗಸ್ವಾಮಿ ಡಿ. ಟಿ., **ಭಾರತದ ಹಬ್ಬಗಳು**, ಸಮಾಜ ಪುಸ್ತಕಾಲಯ, ಧಾರವಾಡ, ೨೦೦೩

೨೦. ಲಕ್ಷ್ಮೀಪತಿ ಕೋಲಾರ, **ಮಾಷ್ಟಿಕರ ಸಂಸ್ಕೃತಿ**, ಕ.ಸಾ.ಅ., ಬೆಂಗಳೂರು, ೧೯೯೩

೨೧. ಲಕ್ಷ್ಮಣ್ ತೆಲಗಾವಿ, **ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೭

೨೨. ಲಿಂಗಯ್ಯ, **ಗ್ರಾಮದೇವತೆಗಳು**, ಐ. ಬಿ. ಹೆಚ್. ಪ್ರಕಾಶನ, ಬೆಂಗಳೂರು, ೧೯೮೪

೨೩. ಹಿರೇಮಠ ಎಸ್. ಎಸ್., **ಕರ್ನಾಟಕದಲ್ಲಿ ದಲಿತ ಸಂಸ್ಕೃತಿ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೧

೨೪. ಹರಿಶ್ಚಂದ್ರ ದಿಗ್ಸಂಗೀಕರ, **ದಲಿತ ತತ್ವಪದಕಾರ ಜಂಬಗಿ ಶರಣ**, ಅಭಯ ಪ್ರಕಾಶನ, ಗುಲ್ಬರ್ಗಾ, ೨೦೦೨

೨೫. ಶಿವಪ್ಪ ಕೆ., **ಬಳ್ಳಾರಿ ಜಿಲ್ಲೆಯ ಹೊಲೆಯ ಮಾದಿಗರ ಸಂಸ್ಕೃತಿ**, ಸಾರ ಎಂಟರ್‌ಪ್ರೈಜಸ್, ಮೈಸೂರು,೨೦೦೪

೨೬. ರಮೇಶ್ ಸ.ಚಿ., **ಕರ್ನಾಟಕ ಜಾನಪದ ಸಂಸ್ಕೃತಿ**, (ಸಂ.), ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೪

# ವಕ್ತೃವಿವರ

| ಕ್ರ. ಸಂಖ್ಯೆ | ಹೆಸರು | ವಯಸ್ಸು | ಜಾತಿ | ಬೆಡಗು | ವಿದ್ಯಾಭ್ಯಾಸ | ಸ್ಥಳ | ವೃತ್ತಿ |
|---|---|---|---|---|---|---|---|
| ೧. | ದುರುಗಮ್ಮ | ೭೫ | ಮಾದಿಗ | ಐವಳ್ಳಿ | ಇಲ್ಲ | ದೇವಸಮುದ್ರ | ಕೂಲಿ |
| ೨. | ಹನುಮಕ್ಕ | ೫೦ | ಮಾದಿಗ | ಬಂಡಾರಿ | ೧ನೇ ತರಗತಿ | ದೇವಸಮುದ್ರ | ಕೂಲಿ |
| ೩. | ಲಸುಮಕ್ಕ | ೬೫ | ಮಾದಿಗ | ಮಚ್ಚೇಲರು | ಇಲ್ಲ | ದೇವಸಮುದ್ರ | ಕೂಲಿ |
| ೪. | ಹೊನ್ನೂರಮ್ಮ | ೫೬ | ಮಾದಿಗ | ಐವಳ್ಳಿ | ಇಲ್ಲ | ದೇವಸಮುದ್ರ | ಕೂಲಿ |
| ೫. | ಈರಮ್ಮ | ೫೮ | ಮಾದಿಗ | ಚಿತ್ತಾಲರು | ಇಲ್ಲ | ತಿಮ್ಮಲಾಪುರ | ಕೂಲಿ |
| ೬. | ಸರಸ್ವತಿ | ೪೫ | ಮಾದಿಗ | ಮಚ್ಚಿಗರು | ೫ನೇ ತರಗತಿ | ತಿಮ್ಮಲಾಪುರ | ಗೃಹಿಣಿ |
| ೭. | ನಾಗಮ್ಮ | ೫೫ | ಮಾದಿಗ | ಬಂಡಾರಿ | ೩ನೇ ತರಗತಿ | ತಿಮ್ಮಲಾಪುರ | ಗೃಹಿಣಿ |
| ೮. | ತಿಮ್ಮಕ್ಕ | ೭೦ | ಮಾದಿಗ | ಮೀನಿಂಗ್ಲ | ಇಲ್ಲ | ತಿಮ್ಮಲಾಪುರ | ಕೂಲಿ |
| ೯. | ಎಲ್ಲಪ್ಪ | ೭೫ | ಮಾದಿಗ | ಐವಳ್ಳಿ | ಇಲ್ಲ | ರಾಂಪುರ | ಕೂಲಿ |
| ೧೦. | ನಾಗರಾಜ | ೬೫ | ಮಾದಿಗ | ಐವಳ್ಳಿ | ೫ನೇ ತರಗತಿ | ರಾಂಪುರ | ಬೇಸಾಯ |
| ೧೧. | ಮರಿಯಣ್ಣ | ೮೦ | ಮಾದಿಗ | ಐವಳ್ಳಿ | ೧ನೇ ತರಗತಿ | ರಾಂಪುರ | ಬೇಸಾಯ |
| ೧೨. | ಚೌಡಪ್ಪ | ೪೫ | ಮಾದಿಗ | ಬಂಡಾರಿ | ೩ನೇ ತರಗತಿ | ವೆಂಕಟಾಪುರ | ಕೂಲಿ |
| ೧೩. | ಗಂಗಾಧರ | ೫೦ | ಮಾದಿಗ | ಬಂಡಾರಿ | ಇಲ್ಲ | ವೆಂಕಟಾಪುರ | ಕೂಲಿ |
| ೧೪. | ಕಾಡಣ್ಣ | ೪೦ | ಮಾದಿಗ | ಮಚ್ಚೇಲರು | ಇಲ್ಲ | ವೆಂಕಟಾಪುರ | ಕೂಲಿ |

| | | | | | | | |
|---|---|---|---|---|---|---|---|
| ೧೫. | ಬೊಮ್ಮಕ್ಕ | ೩೫ | ಮಾದಿಗ | ಐವಳ್ಳಿ | ಇಲ್ಲ | ವೆಂಕಟಾಪುರ | ಕೂಲಿ |
| ೧೬. | ಹುಲೆಕ್ಕ | ೩೮ | ಮಾದಿಗ | ಬಂಡಾರಿ | ೨ನೇ ತರಗತಿ | ನಾಗಸಮುದ್ರ | ಕೂಲಿ |
| ೧೭. | ತುಪ್ಪದಕ್ಕ | ೩೮ | ಮಾದಿಗ | ಬಂಡಾರಿ | ಇಲ್ಲ | ನಾಗಸಮುದ್ರ | ವ್ಯಾಪಾರ |
| ೧೮. | ಭೀಮಕ್ಕ | ೩೦ | ಮಾದಿಗ | ಐವಳ್ಳಿ | ೪ನೇ ತರಗಿತ | ಗುಡ್ಡದ ಹಳ್ಳಿ | ಕೂಲಿ |
| ೧೯. | ಲಸುಮವ್ವ | ೩೦ | ಮಾದಿಗ | ಐವಳ್ಳಿ | ೧ನೇ ತರಗತಿ | ವಿಠಲಾಪುರ | ಕೂಲಿ |
| ೨೦ | ಸಾವಿತ್ರಿ | ೪೦ | ಮಾದಿಗ | ಬಂಡಾರಿ | ೪ನೇ ತರಗತಿ | ವಿಠಲಾಪುರ | ದನಕಾಯುವುದು |
| ೨೧. | ಸಣ್ಣೀರಮ್ಮ | ೫೮ | ಮಾದಿಗ | ಐವಳ್ಳಿ | ಇಲ್ಲ | ವಿಠಲಾಪುರ | ದನಕಾಯುವುದು |
| ೨೨. | ತಿಪ್ಪೇಸ್ವಾಮಿ | ೬೦ | ಮಾದಿಗ | ಐವಳ್ಳಿ | ೧೦ನೇ ತರಗತಿ | ಪೆನ್ನಮ್ಮನಹಳ್ಳಿ | ಬೇಸಾಯ |
| ೨೩. | ಗುಂಡಪ್ಪ | ೬೫ | ಮಾದಿಗ | ಬಂಡಾರಿ | ೮ನೇ ತರಗತಿ | ಪೆನ್ನಮ್ಮನಹಳ್ಳಿ | ಬೇಸಾಯ |
| ೨೪. | ನಾಗಲಿಂಗಪ್ಪ | ೩೦ | ಮಾದಿಗ | ಮಟ್ಟಿಗ | ೭ನೇ ತರಗತಿ | ಪೆನ್ನಮ್ಮನಹಳ್ಳಿ | ಕುರಿಕಾಯುವುದು |
| ೨೫. | ಸೋಮಣ್ಣ | ೩೫ | ಮಾದಿಗ | ಐವಳ್ಳಿ | ಟಿ.ಸಿ.ಎಚ್. | ದಡಗೂರು | ಶಿಕ್ಷಕ |
| ೨೬. | ಭೀಮಪ್ಪ | ೪೫ | ಮಾದಿಗ | ಎಗ್‌ಡೋರು | ಬಿ.ಇ.ಡಿ. | ದಡಗೂರು | ಶಿಕ್ಷಕ |
| ೨೭. | ಸಿಂಗಮ್ಮ | ೫೫ | ಮಾದಿಗ | ಎಗ್‌ಡೇರು | ೧ನೇ ತರಗತಿ | ದೇವಸಮುದ್ರ | ಕೂಲಿ |
| ೨೮. | ರಾಧಮ್ಮ | ೨೮ | ಮಾದಿಗ | ಐವಳ್ಳಿ | ೫ನೇ ತರಗತಿ | ಮೊಳಕಾಲ್ಮೂರು | ಕೂಲಿ |
| | | | | | | | |
| | | | | | | | |

# ಮೊಳಕಾಲ್ಮೂರು ಪರಿಸರದ
# ಮಾದಿಗ ಸಮುದಾಯದ ಆಚರಣೆಗಳು

## ಛಾಯಾಚಿತ್ರಗಳು



ಮದುವೆಯ ಸಂದರ್ಭದಲ್ಲಿ ಅರಿವೇಣಿಗಳನ್ನು ಹೊತ್ತು ತರುವ ಸಂಪ್ರದಾಯ



ವಧು-ವರರನ್ನು ಗುಡಿಗಳಿಗೆ ಕರೆದೊಯ್ಯುವ ಶಾಸ್ತ್ರ



ಮುಕುಮತಿಯ ಸಂದರ್ಭದಲ್ಲಿ ವಿಜ್ಞಾಸುವ ಶಾಸ್ತ್ರ



ಬೀಗರು ತಂದ ವಡಗೆಗಳು



ವಧು-ವರರನ್ನು ಕೂಡಿಸಿದಾಗ ಮುದುಕಿಯರು ಶೋಬಾನೆ ಪದಹಾಡುವುದು



ಗಂಗೆಪೂಜೆ ಮಾಡುವ ಶಾಸ್ತ್ರ



ನೆಲ್ಲಕ್ಕಿ ಕುಟ್ಟುವ ಶಾಸ್ತ್ರ



ಐರಿವೋಣಿಗೆಗಳನ್ನು ಮನೆಯೊಳಗೆ ಪೂಜೆ ಮಾಡುವ ಶಾಸ್ತ್ರ



ಮೆರವಣಿಗೆ ಮಾಡುವ ಶಾಸ್ತ್ರ



ವರರನ್ನು ಗುಡಿಗೆ ಕರೆದೊಯ್ಯುವ ಶಾಸ್ತ್ರ

